ಪ್ರತಿಭಾ ಗ್ರಂಥಮಾಲೆ, ಧಾರವಾಡ. ಕಿರಣ ೭

# ಚಕಮಕಿ

(ಕಥಾ ಸಂಕಲನ)



ಶ್ರೀ ಬೇಂದ್ರೆ ಲಕ್ಷ್ಮಣರಾಯರು



೧ ಫೆಬ್ರುವರಿ ೧೯೪೫  ಬೆಲೆ ೨ ರೂಪಾಯಿ

ಪ್ರಕಾಶಕರು :
ಭಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ, ಧಾರವಾಡ.

## ಪರಿವಿಡಿ

೧ ಚಕಮಕಿ
೨ ಎರಡನೆಯ ಸಂಬಂಧವಲ್ಲ
೩ ಬದುಕು ಬಾಳು
೪ ಸರಸೀ ಕೂಡ ಸಿನೆಮಾ
೫ ಕುಡಿದ ಕಣ್ಣೀರು
೬ ಕಣ್ಮರೆಯಾದ ಬಂದೂಕು
೭ ಜಟಕಾ ಸಾಬಿ
೮ ನೀಲಪ್ಪಾ
೯ ಅಣ್ಣಾ ತಮ್ಮಾ
೧೦ ಗರತಿಯಾಗುವ ಆಶೆ
೧೧ ಸಾಹಿತಿಗೊಂದು ಸಮಾಧಾನ
೧೨ ಮೀರೆಯ ಮದ್ದು

ಮುದ್ರಕರು :
ಎಮ್. ಜಿ. ಪಾಲೇಕರ
ಹಿಂದಮಾತಾ ಮು. ಧಾರವಾಡ.

# ಮುನ್ನುಡಿ

ಹಿರಿಯತನದ ಹರಕೆ ಕೊಡುವ ಬುದ್ಧಿಯಿಂದ ನಾನು ಈ ಮುನ್ನುಡಿ ಬರೆಯುತ್ತಿಲ್ಲ. ಈಗ ಯಾವುದಾದರೊಂದು ಪುಸ್ತಕಕ್ಕೆ ಯಾರಾದರೂ ಮುನ್ನುಡಿ ಬರೆದಿದ್ದರೆ, ಲೇಖಕ-ಮುನ್ನುಡಿಕಾರರಿಬ್ಬರನ್ನೂ-ಕಾರಣವಿದ್ದೋ, ಇಲ್ಲದೆಯೊ—ಸಂದೇಹದೃಷ್ಟಿಯಿಂದ ನೋಡುವ ಸ್ವಭಾವ ಸಾಮಾನ್ಯವಾಗಿ ನಮ್ಮಲ್ಲಿ ಬೆಳೆಯುತ್ತಲಿದೆ; ಅದರಂತೆಯೆ 'ಪರಸ್ಪರ ಪ್ರಶಂಸಾ ಸಂಘದ ಸದಸ್ಯರು' ಎಂದು ಇಬ್ಬರನ್ನೂ ಟೀಕಿಸಿ ನುಡಿವ ಅಣಕುಮಾತು ಅಲ್ಲಲ್ಲಿ ಕೇಳಬರುತ್ತದೆ. ಈ ವಿಷಯ ನನ್ನ ಲಕ್ಷ್ಯದಲ್ಲಿದೆಯಾದರೂ, ಶ್ರೀಮಾನ್ ಬೇಂದ್ರೆ ಲಕ್ಷ್ಮಣರಾಯರ ಈ ಕಥಾಸಂಕಲನಕ್ಕೆ ಮುನ್ನುಡಿ ಬರೆಯಲು ಲೇಖನಿಯನ್ನು ಮುಂದುವರಿಸುತ್ತಿದ್ದೇನೆ. ಒಂದು ಭಿನ್ನ ಪ್ರಾಮಾಣಿಕ ಭಾವನೆ ಧೈರ್ಯಕೊಟ್ಟು ಈ ಕೆಲಸಕ್ಕೆ ನನ್ನನ್ನು ತೊಡಗಿಸಿದೆ; ಅದಾವುದೆಂದರೆ ಇದರಲ್ಲಿಯ ಕತೆಗಳನ್ನು ಓದಿ ನನ್ನಂತೆಯೆ ಆನಂದ ಹೊಂದಿ ಮೆಚ್ಚಿದ ವಾಚಕವರ್ಗ, ನನ್ನ ಮುನ್ನುಡಿಯ ಮಾತುಗಳನ್ನು ಸಂದೇಹದಿಂದ ಕಾಣದೆಂದು; 'ಪರಸ್ಪರ ಪ್ರಶಂಸಕ ಸಂಘ'ಕ್ಕೆ ನನ್ನನ್ನು ಸೇರಿಸದೆಂದು.

ಇಂದು ಕನ್ನಡ ಕಥಾಸಾಹಿತ್ಯದ ತೋಟದಲ್ಲಿ ಹೂಗಿಡ-ಹೂಬಳ್ಳಿಗಳಿಗಿಂತ ಹುಲ್ಲುಕಸದ ಗಡ್ಡೆಗಳೆ ಹೆಚ್ಚಾಗಿ ಹುಟ್ಟುತ್ತಲಿವೆ. ಕಾಲಾನು-ಸಾರವಾಗಿ ನಾಡಿನಲ್ಲಿಪತ್ರಿಕಾ ವ್ಯವಸಾಯ ಬೆಳೆದಿದೆ — ದಿನದಿನಕ್ಕೂ ಬೆಳೆಯುವುದರಲ್ಲಿದೆ. ಈ ವ್ಯವಸಾಯಕ್ಕೆ ಬರುಬರುತ್ತ ಒಂದು ವ್ಯಾಪಾರದ ಸ್ವರೂಪವೂ ಬರತೊಡಗಿದೆ. ಆದುದರಿಂದ ವ್ಯಾಪಾರದೃಷ್ಟಿಯಿಂದ ಬಂಡವಾಳ ಹಾಕಿ ಎಂತೆಂತಹ ಜನರೂ ಇಂದು'ಸಂಪಾದಕ'ರಾಗಿ ಪತ್ರಿಕಾ ರಂಗಕ್ಕೆ ನುಗ್ಗುತ್ತಲಿದ್ದಾರೆ. ಕನ್ನಡ 'ಸಂಪಾದಕ' ವರ್ಗದಲ್ಲಿ ಇಂದು ಕನ್ನಡ ಭಾಷೆಬಾರದೆ ಇರುವವರನ್ನು ಕಾಣಬಹುದು; ಬರೆಯುವ ಕಲೆಯನ್ನು ಕನಸಿನಲ್ಲಿ ಕೂಡ ಕಂಡರಿಯದವರನ್ನೂ ನೋಡಬಹುದು. ವೃತ್ತಪತ್ರಿಕೆಗಳ ಏಜಂಟರಾಗಿದ್ದವರು, ಬೀಡಿಯಂಗಡಿಯ ಯಜಮಾನರು

ಹೋಟಲುಗಳಲ್ಲಿ ಮಾಣಿಗಳಾಗಿದ್ದವರು ಕೂಡ ಪತ್ರಿಕಾಪ್ರಪಂಚದಲ್ಲಿ 'ಸಂಪಾದಕ'ರಾಗಿ ನುಗ್ಗಿದುದು ನಮ್ಮಲ್ಲಿ ಕಂಡುಬರುವುದು. ಎಂತಹದನ್ನು ಓದಬೇಕೆಂಬ ವಿಮರ್ಶಕಬುದ್ಧಿ ಒಳಿಯದ ನಮ್ಮ ಜನಸಾಮಾನ್ಯರಲ್ಲಿ ಎಂತಹ ಪತ್ರಿಕೆಗೂ ಸ್ವಾಗತ ದೊರೆತೇ ದೊರೆಯುವುದು. ವ್ಯವಹಾರ ದೃಷ್ಟಿಯಿಂದ ಹೊರಟ ಪತ್ರಿಕೆಗಳಲ್ಲಿ 'ಸಂಪಾದಕ'ರಾಗಿರುವವರು ಬರೆಯುವುದೇನೂ ಇರುವುದಿಲ್ಲ. ಯಾರಾದರೂ ಏನನಾದರೂ ಪುಕ್ಕಟೆಯಾಗಿ ಬರೆದು ಕಳುಹಬೇಕು; ಇವರು ಬಂದುದನ್ನು ಬಂದಂತೆ ಪ್ರಕಟಿಸಬೇಕು. ಬಹುಜನ ಪ್ರಾರಂಭ ಲೇಖಕರು ಮೊದ-ಮೊದಲು ಬರೆವುದು ಸಣ್ಣಕತೆಗಳನ್ನೆ; ಆದುದರಿಂದ, ಇಂತಹ ಪತ್ರಿಕೆಗಳ ಪುಟಗಳನ್ನು ತುಂಬುತ್ತಿರುವುವು ಸಣ್ಣಕತೆಗಳೆ! ಕೈಬರೆಹದ ಕತೆ ಮುದ್ರಣದ ಮೊಳೆಗಳಿಂದ ಮೂಡಿ ಕಂಡರಾಯಿತು; ಅದು ಮಿಕ್ಕವರಿಗೆ ಆದರ್ಶಕಥೆ ಎನಿಸುವುದು. ಅಂತಹವೇ ಹಿಂಡುಹಿಂಡಾಗಿ 'ಕತೆಗಳು ಹೊರಬೀಳುವುವು. ಹೀಗಾಗಿ ಇಂದು ಕನ್ನಡ ಸಣ್ಣಕಥಾಸಾಹಿತ್ಯದ ಬಹುಭಾಗ ಕೀಳುಕಸವಾಗಿ ಪರಿಣಮಿಸುತ್ತಲಿದೆ.

ಕಥಾಲೇಖನಕಲೆಯಿಂದ ಕಸಬೋಳೆಯಿಸುವ ಕೆಲಸಮಾಡಿಸಬೇಕೆಂದೂ ಕೆಲವು ಜನರು, ಸಿದ್ಧರಾಗಿ ಇಂದು ಮುಂದೆ ಬಂದಿದ್ದಾರೆ ಅಂತಹ ಜನರು ಕೆಲವು ತಮ್ಮ ಮನಸಿನ ಬೊಂಬೆಗಳನ್ನು ನಿರ್ಮಿಸಿ, ಮನಸ್ಸಿಗೆ ಒಂದಂತೆ ಕುಣಿಸಿ ತೋರಿಸಿ, ಆ ಕುಣಿದಾಟಗಳನ್ನು ಕತೆಗಳೆಂದು ಹೊರಗೆ ಬಿಡುವರು. ಇಂತಹ ಕತೆಗಳಲ್ಲಿ ತರ್ಕಶುದ್ಧ ವಿಚಾರಗಳ ಹಂದರವಿರುವುದಿಲ್ಲ; ಭಾಷೆ-ಶೈಲಿಗಳ ಬೆಡಗಿನ ಬಳ್ಳಿಯ ಹಬ್ಬುಗೆಯಿರುವುದಿಲ್ಲ; ಭಾವ-ರಸಗಳ ಪರಿಪಾಕದಿಂದ ಅರಳಿದ ಹೃದಯದ ಹೂಗಳೂ ಇರುವುದಿಲ್ಲ. ಯಾವುದೋ ಒಂದು ರಾಜಕೀಯ ಇಲ್ಲವೆ ಸಾಮಾಜಿಕ ವಾದವನ್ನು ಹದಿನಾರಾಣೆ ಸತ್ಯವೆಂದು ನಂಬಿ, ಅದನ್ನು ಸಿದ್ಧಗೊಳಿಸಲು ಮಾಡಿದ ಹಸಿ-ಬಿಸಿ ಹವಣಿಕೆಗಳಿವು. ಇಂತಹ 'ಪ್ರಚಾರಾತ್ಮಕ ಕಥೆ'ಗಳೂ ನಮ್ಮ ಇಂದಿನ ಸಣ್ಣಕತೆಯ ಸಾಹಿತ್ಯದ ಮಡಿಗಳನ್ನು ತುಂಬಿ ತುಂಬಿ ಬೆಳೆಯುತ್ತಲಿವೆ.

ಅತೃಪ್ತಕಾಮಿಗಳ ಕೀಳುವಿಕಾರದ ಕಾಮದ ಕನಸುಗಳೂ ಇಂದು ಹೆಚ್ಚುಹೆಚ್ಚಾಗಿ 'ಸಣ್ಣಕತೆ'ಗಳ ರೂಪ ಪಡೆದು ಕಣ್ಣಿಗೆ ಕಾಣುತ್ತಿರುವುವು. ಇಂತಹ ಕತೆಗಳಲ್ಲಿ ಗಂಡು-ಹೆಣ್ಣಿನ ಸಂಬಂಧದಲ್ಲಿ ಯಾವ ಬಗೆಯ

ಸಂಯಮದ ಅಪೇಕ್ಷೆಯಿರುವುದಿಲ್ಲ; ಇಂತಹ ಅಸಂಯಮದ ಮೂಲಕ ಸಮಾಜದ ಸಂಘಟನೆಯ ಮೇಲೆ ಎಂತಹ ಏಟು ಬೀಳಬಹುದೆಂಬ ದೂರದ ವಿಚಾರವೂ ಇರುವುದಿಲ್ಲ. ಗಂಡು-ಹೆಣ್ಣಿನ ಸಂಬಂಧಕ್ಕೊಂದು ಪಾವಿತ್ರ್ಯ ತಂದುಕೊಡಬೇಕೆಂಬ ಆದರ್ಶವನ್ನು ಇಂತಹ ಕಥೆಗಳು, ಮಾನವ ಸಹಜ ವಿಕಾರದ ತೆರೆಯಿಂದ ಮರೆಮಾಡುವ ಕೆಲಸವನ್ನು ಮಾತ್ರ ಮಾಡುವುವು. ಶಿಕ್ಷಣ, ಊಳಿಗ, ಬಡತನಗಳ ಮೂಲಕ, ಇಂದು ನಮ್ಮಲ್ಲಿ ಅತೃಪ್ತಕಾಮಿಗಳ ಸಂಖ್ಯೆ ಬೆಳೆಯುತ್ತ ನಡೆದಿದೆ; ಅವರ ವಿಚಾರದ ಪ್ರತಿನಿಧಿಗಳಾಗಿ ಹೊರಟ ಕಥಾಸಾಹಿತ್ಯದ ಕಂಟಿಗಳೂ ಬೆಳೆಯುವುದರಲ್ಲಿವೆ. ಇಂತಹ ವಿಚಿತ್ರ ವಿಷಮ ಸಂದರ್ಭದಲ್ಲಿ ಶ್ರೀ. ಲಕ್ಷ್ಮಣರಾಯರು ಈ 'ಚಕಮಕಿ' ಯನ್ನು ಕನ್ನಡ ವಾಚಕರ ಕೈಗೆ ಕೊಟ್ಟಿದ್ದಾರೆ.

ಶ್ರೀ ಲಕ್ಷ್ಮಣರಾಯರು ಹೊಸ ಲೇಖಕರಂತೆ ಕಂಡರೂ ಹೊಸಬರಾದ ತರುಣ ಲೇಖಕರಲ್ಲ; ಪ್ರಚಾರದಲ್ಲಿರುವ ಯಾವುದೊಂದು ರಾಜಕೀಯ ಇಲ್ಲವೆ ಸಾಮಾಜಿಕ ತತ್ತ್ವವನ್ನು ಪ್ರಚಾರಮಾಡಲಿಕ್ಕೆಂದೂ ಅವರ ಕಥನಕಲೆ ಮುಂದೆ ಬಂದುದಲ್ಲ; ಕಾಮದ ಕನಸುಗಳನ್ನು ಕಟ್ಟಿ ಹೊರಕ್ಕೆ ಹಾಕುವ ಪೂರ್ವವಯಸ್ಸೂ ಅವರಿಗಿಲ್ಲ. ಇಲ್ಲಿಯ ಎಲ್ಲ ಕತೆಗಳೂ ಅವರ ವಿಶಾಲವಾದ ಜೀವನದ ಅನುಭವ; ಸೂಕ್ಷ್ಮವಾದ ಸಾಹಿತ್ಯಾಭ್ಯಾಸ ಇವುಗಳಮೇಲೆ ನಿಂತುವುಗಳಾಗಿವೆ. ಮಾನವನ ಮನೋಧರ್ಮವನ್ನು ಪೃಥಕ್ಕರಿಸಿ, ಅಲ್ಲಿ ಬೀಜರೂಪವಾಗಿ ಹುದುಗಿರುವ ಬೇರೆಬೇರೆ ಆಶೆ-ಆಕಾಂಕ್ಷೆಗಳು ಹೇಗೆ ಏಕೆ ಬೆಳೆಯುವುವು, ಹೇಗೆ ಏಕೆ ಆಘಾತಗೊಂಡು ನರಳುವುವು, ಹೇಗೆ ಏಕೆ ನರಳಾಟವನ್ನು ಮರೆಯಲು ಹವಣಿಸುವುವು— ಎಂಬುದನ್ನು ಸೂಕ್ಷ್ಮವಾಗಿ ಕಂಡುಕೊಂಡುದರ ಫಲಗಳಾಗಿವೆ. ಯಾರೂ ಕಾಣದ ಸ್ವರ್ಗವನ್ನು ಕಾಣಿಸಲು ಹೊರಟ ಕತೆಗಳಲ್ಲ ಇವು; ಆದರೆ ಬದುಕನ್ನು ಸ್ವರ್ಗವನ್ನಾಗಿ ಮಾಡಿಕೊಳ್ಳಲು ಬರುವುದೆಂಬುದನ್ನು ತೋರಿಸುವಂತಹವು. ಎಲ್ಲರೂ ಕಾಣಬಹುದಾದ ವಸ್ತುಗಳನ್ನೇ ಒಳಗೊಂಡ ಕತೆಗಳಿವು; ಆದರೆ 'ವಾಸ್ತವ ಸಾಹಿತ್ಯ' ಎನಿಸಿಕೊಳ್ಳುವಂತಹ ವೃತ್ತ ಪತ್ರಿಕೆಯ ವರದಿಯ ಜಾತಿಗೆ ಸೇರದಂತಹವು. ಪ್ರಾಣಿಗೆ ವ್ಯಕ್ತಾಂಗವಾದ ದೇಹವಿರುವುದು; ಅವ್ಯಕ್ತಾಂಗವಾದ ಜೀವವಿರುವುದು. ಹಾಗೆಯೇ ಕತೆಗೆ ಕೂಡ ಎರಡು ಅಂಗಗಳು; ವ್ಯಕ್ತಾಂಗವಾದ ಸಂವಿಧಾನಕ— ಅವ್ಯಕ್ತಾಂಗವಾದ ರಸಸೌಂದರ್ಯ.

ಕಥನತಂತ್ರ, ಭಾಷಾಶೈಲಿ ಇವೆಲ್ಲ ವ್ಯಕ್ತಾಂಗದ ಅಲಂಕಾರಗಳು; ತರ್ಕ ಶುದ್ಧವಿಚಾರ, ಪಾತ್ರಪರಿಪುಷ್ಟಿ, ಭಾವಪರಿಪುಷ್ಟಿ, ಆದರ್ಶದರ್ಶನ ಇವೆಲ್ಲ ಅವ್ಯಕ್ತಾಂಗದ ಸಂಸ್ಕಾರಗಳು. ಈ ಅಲಂಕಾರ ಸಂಸ್ಕಾರಗಳು ಪೂರ್ಣತೆಯನ್ನು ಮುಟ್ಟಿದ ಕತೆಗಳು ಒಳ್ಳೆಯ ಕತೆಗಳೆನಿಸಿಕೊಳ್ಳುವುವು 'ಚಕಮುಕಿ' ಯಲ್ಲಿಯ ಹೆಚ್ಚು ಕತೆಗಳಲ್ಲಿ ಇವೆರಡರ ಪರಿಪೂರ್ಣತೆಯನ್ನು ನಾವು ಕಾಣಬಹುದಾಗಿದೆ.

ಈ ಸಂಕಲನಕ್ಕೆ ಸೇರಿರುವ ಹನ್ನೆರಡು ಕತೆಗಳಲ್ಲಿ ಒಂದೊಂದರಲ್ಲಿಯೂ ಒಂದೊಂದು ಬಗೆಯ ಕಥಾತಂತ್ರ (ಟೆಕ್ನಿಕ್)ದ ಹೊಸತನವಿದೆ. 'ಚಕ-ಮುಕಿ' 'ಬದುಕು ಬಾಳು' 'ಸಾಹಿತಿಗೊಂದು ಸಮಾಧಾನ' ಇವು 'ಸಣ್ಣಕತೆಗಳೇ ಇವು?' ಎಂದು ಸಂಶಯ ಹುಟ್ಟಿಸುವಂತಹ ತಂತ್ರದಿಂದ ಕೂಡಿವೆ. 'ಸರಸಿ ಕೂಡ ಸಿನೇಮಾ' ಎಂಬುದಂತೂ ತಂತ್ರದೃಷ್ಟಿಯಿಂದ ಮೊದಲ ತರಗತಿಗೆ ಸೇರಬೇಕಾದ ಕತೆ 'ಕಣ್ಮರೆಯಾದ ಬಂದೂಕು' 'ಜಟಕಾ ಸಾಬಿ' ಕಥೆಗಳಲ್ಲಿ ತಂತ್ರದ ಹೊಸತನವಿರದಿದ್ದರೂ ಸನ್ನಿವೇಶ ಚಮತ್ಕೃತಿ, ಭಾವಪರಿಪುಷ್ಟಿ, ಪಾತ್ರರಚನೆಗಳ ಮೂಲಕ ಇವು ಈ ಸಂಕಲನ ಮಂದಿರಕ್ಕೆ ಶಿಖರಗಳಾಗಿ ಶೋಭಿಸುತ್ತಿವೆ.

ದಾಂಪತ್ಯ ಜೀವನದ ಸುಂದರಚಿತ್ರಗಳನ್ನು ರೇಖಿಸುವುದರಲ್ಲಿ ಶ್ರೀ ಲಕ್ಷ್ಮಣರಾಯರದು ಪಳಗಿದ ಕೈ. ಮೊದಲಿನ ಆರು ಕತೆಗಳಲ್ಲಿ ನಮಗೆ ಬೆರಗನ್ನುಂಟುಮಾಡುವುದು ಈ ಚಕಮುಕಿಯ ಬೆಳಕೆ. ಎರಡು ಭಿನ್ನ ಸ್ವಭಾವಗಳ ಪರಸ್ಪರ ಆಘಾತದ 'ಚಕ್‌ಮುಕ್' ಸಪ್ಪಳು ಕೇಳುವುದರೊಡನೆಯೆ, ಆ ಸ್ವಭಾವದ ಹಿಂದಿನ ಹೃದಯದ ಬೆಳಕು ಮಿಂಚಿ ವಾಚಕರನ್ನು ತನ್ನ ಕಡೆಗೆ ಆಕರ್ಷಿಸಿಕೊಂಡು ಬಿಡುವುದು. 'ಹೆಂಡತಿ ಬೇಕೆ' 'ಕುಡಿದ ಕಣ್ಣೀರು' 'ಅಣ್ಣತಮ್ಮ' ಕತೆಗಳಲ್ಲಿ ಈ ಬೆಳಕು ಮನೋಹರವಾಗಿ ಮಿಂಚುತ್ತಲಿದೆ. ಸ್ವಾಮಿಸೇವಕನಾದ 'ನೀಲಪ್ಪ'ನ ಪಾತ್ರ, 'ಗರತಿಯಾಗುವ ಆಶೆ'ಯನ್ನು ಇರಿಸಿಕೊಂಡರೂ ಅನಿವಾರ್ಯವಾಗಿ ಅಡ್ಡದಾರಿ ಹಿಡಿಯಬೇಕಾಗಿ ಬಂದ ಸೇವಂತಿ, ವಿರೂಪಾಕ್ಷಭಟ್ಟನ ನಿರಪರಾಧಿನಿ ಹೆಂಡತಿಗೆ ಮದ್ದಿಕ್ಕಿಕೊಂಡ ಮಹತ್ವಾಕಾಂಕ್ಷೆಯ 'ಮಾರಿ' ಈ ಎಲ್ಲ ಪಾತ್ರಗಳೂ ವಾಚಕರ ಮನಸ್ಸಿನಲ್ಲಿ ಬಹುದಿನ ಮೂಡಿ ನಿಲ್ಲುವಂತಹವು. ಹೊಟ್ಟೆಗಾಗಿ ಒಮ್ಮೊರ ಸತ್ಯವನ್ನು ಬಳಸಿದರೂ ಸಂದರ್ಭಬಂದಾಗ ಎಂತಹ ತ್ಯಾಗಕ್ಕೂ

ಸಿದ್ಧವಾಗುವ ಮನುಷ್ಯತ್ವ ತುಂಬಿದ 'ಜಟಕಾ ಸಾಬಿ' ಎಂತಹ ಕಲ್ಲೆದೆಯ ವರಿಂದಲೂ ಮೆಚ್ಚಿಕೆಯ ಕಣ್ಣೀರ ಕಾಣಿಕೆ ಪಡೆಯದಿರನು. ಬಂದೂಕು ಕಣ್ಮರೆಯಾಗುವುದಕ್ಕೆ ಕಾರಣನಾದ ಪೋಲಿಸ್ ಹವಾಲ್‍ದಾರ ಒದ್ದಪ್ಪನ ಸಹೃದಯತೆ,ಕರ್ತವ್ಯ ಬುದ್ಧಿಗಳು ಎಲ್ಲ ಪೋಲಿಸರಲ್ಲಿಯೂ ಇದ್ದರೆ ನಮಗೆ ದೇವದೂತ'ರೆಂಬವರ ಅಪೇಕ್ಷೆಯೆ ಇರುತ್ತಿರಲಿಲ್ಲ. ಗಂಡ-ಹೆಂಡಿರ ಸಂವಾದದ ವಾಸ್ತವ ಚಿತ್ರಗಳು, ವಾಚಕರಿಗೆ ಸ್ವಾನುಭವವನ್ನು ನೆನಪಿಗೆ ತಂದು ಕೊಟ್ಟು ಸಹಾನುಭೂತಿಯ ಕಿರುನಗೆಯ ತೆರೆಗೆಯನ್ನು ಕೊಳ್ಳದೆ ಬಿಡವು.

ಕತೆಗಳ ಭಾಷೆ ಕತೆನಡೆದ ಪ್ರದೇಶದ ಜಾನಪದ ರೀತಿಯದಾಗಿದೆ. ಹೆಚ್ಚಿನ ಕತೆಗಳು ಉತ್ತರ ಕರ್ನಾಟಕದ ಮನೆಮಾತನ್ನು ಬಳಸಿದುವಾಗಿವೆ. ಆದರೂ ಎಲ್ಲ ಭಾಗದವರಿಗೂ ತಿಳಿಯುವಂತಿವೆ. ಸಂಭಾಷಣೆಗಳು ಸಜೀವವಾಗಿದ್ದು ಒಂದೊಂದು ಮಾತೂ ಪಾತ್ರದ ಸ್ವರೂಪ ಚಿತ್ರಣಕ್ಕೆ ಸಹಕರಿಸುವಂತಿವೆ. ಎಲ್ಲಿಯೂ ಭಾಷೆಯ ಕೃತ್ರಿಮತೆ ಕಂಡು ಬರುತ್ತಿಲ್ಲ; ಆಭಾಸಾತ್ಮಕ—ಅಸ್ಪಷ್ಟಾರ್ಥಕ—ಶಬ್ದಾಲಂಕಾರಗಳಿಲ್ಲ.

ಮುದ್ರಣದ ಕರಡುಪ್ರತಿಗಳನ್ನು ತಿದ್ದುವವರು ಇನ್ನಿಷ್ಟು ಲಕ್ಷ್ಯಗೊಟ್ಟು ತಮ್ಮ ಕೆಲಸಮಾಡಿದ್ದರೆ ಇಷ್ಟೊಂದು ಮುದ್ರಣದೋಷಗಳು ಉಳಿಯುತ್ತಿರಲಿಲ್ಲ. ಈ ಸಂಕಲನದಲ್ಲಿಯ ಇದೊಂದು ಕೊರತೆಯನ್ನು ಎತ್ತಿ ಹೇಳದಿರಲಾರೆನು. ಶ್ರೀ. ಲಕ್ಷ್ಮಣರಾಯರು ಇನ್ನೂ ಎಷ್ಟೋ ಕತೆಗಳನ್ನು ಸ್ವತಂತ್ರವಾಗಿ ಬರೆದಿದ್ದಾರೆ- ಅನುವಾದಿಸಿದ್ದಾರೆ;ಏಕಾಂಕ ನಾಟಕ-ಬಹ್ವಾಂಕ ನಾಟಕಗಳನ್ನು ಬರೆದಿದ್ದಾರೆ; ಕಾದಂಬರಿ ಬರೆಯುವುದರಲ್ಲಿದ್ದಾರೆ ಎಲ್ಲವೂ ಬೆಳಕಿಗೆ ಬಂದು, ಕನ್ನಡದ ಲಲಿತ ಸಾಹಿತ್ಯದ ಬೆಳವಣಿಗೆಗೆ ನೆರವನ್ನು ನೀಡಲೆಂದು ಎಲ್ಲರ ಪರವಾಗಿ ನಾನು ಹಾರಯಿಸುತ್ತೇನೆ.

'ಜಯಂತಿ' ಕಾರ್ಯಾಲಯ
ಧಾರವಾಡ
ತಾ. ೧—೩—೧೯೪೫

ಬೆಟಗೇರಿ ಕೃಷ್ಣಶರ್ಮ

# ನನ್ನ ಮಾತು

ಈ ಕಥಾ ಸಂಗ್ರಹದ ಕಥೆಗಳೆಲ್ಲ ಮೊದಲು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. 'ನೀಲಪ್ಪ', 'ಗರತಿಯಾಗುವ ಆಶೆ' ಇವು **ವಾಣಿ**ಯಲ್ಲಿ, 'ಅಣ್ಣ ತಮ್ಮ' **ಉಷೆ**ಯಲ್ಲಿ, ಉಳಿದುವೆಲ್ಲ **ಜಯಂತಿ**ಯಲ್ಲಿ ೧೯೪೩-೪೪ ಈ ಎರಡು ವರ್ಷಗಳ ಅವಧಿಯಲ್ಲಿ ಬೆಳಕುಕಂಡವು. ಶ್ರೀಮಾನ್ ಭಾಲಚಂದ್ರ ಘಾಣೇಕರರು ಈ ಸಂಗ್ರಹವನ್ನು ತಮ್ಮ ಮಾಲೆಯಲ್ಲಿ ಪ್ರಕಟಿಸುವ ಹೊಣೆಹೊತ್ತರು. ಅವರಿಗೆ ನಾನು ಕೃತಜ್ಞ. ನನ್ನ ಮಿತ್ರರಾದ ಶ್ರೀಮಾನ್ ಬೆಟಗೇರಿ ಕೃಷ್ಣಶರ್ಮರು ಬರೆಯಲು ನನ್ನನ್ನು ಪ್ರೋತ್ಸಾಹಿಸಿ ಇದಕ್ಕೊಂದು ಮುನ್ನುಡಿ ಬರೆದು ಹರಕೆಕೊಟ್ಟರು. ಅವರಿಗೆ ನನ್ನ ಅನೇಕಾನೇಕ ವಂದನೆಗಳು. ಅವಸರದಲ್ಲಿ ಪ್ರಕಟವಾದ ಈ ಸಂಗ್ರಹದಲ್ಲಿ ಅಚ್ಚಿನ ದೋಷಗಳು ಹೇರಳವಾಗಿವೆ-ಅವನ್ನು ಬಿಟ್ಟರೆ ಉಳಿದ ಗುಣದೋಷಗಳಿಗೆ ನಾನೇ ಪಾತ್ರ.

**ಲ. ಜಿ ಬೇಂದ್ರೆ**

# ಚಕಮಕಿ.

ನಾನು ಹೊರಗಿಂದ ಮನೆಗೆ ಬರುವ ಹೊತ್ತಿಗೆ ರಾತ್ರಿ ಸುಮಾರು ಹತ್ತು ಗಂಟೆಯಾಗಿತ್ತು. ನನ್ನ ಎರಡೂ ಮಕ್ಕಳು ನಿದ್ದೆ ಹೋಗಿದ್ದುವು. ಈಕೆ ಹಾಸಿಗೆ ಹಾಸುವದರಲ್ಲಿ ತೊಡಗಿದ್ದಳು. ನನ್ನದು ಯಾವಾಗಲೂ ಹೊರಗಿಂದ ಬಂದಕೂಡಲೆ, ಮೊದಲು ನೇರವಾಗಿ ಅಡಿಗೆಮನೆಯವರೆಗೆ ಹೋಗಿಬರುವ ಪದ್ಧತಿ. ಇಂದು ಕೂಡ ಹಾಗೆಯೆ ಅಲ್ಲಿಯವರೆಗೆ ಹೋದೆ. ಅಡಿಗೆಮನೆಯಲ್ಲಿಯ ಅರ್ಧ ಜಾಗ ಕಪ್ ಬಸಿ, ತಿಂಡಿ ತಿಂದ ತಟ್ಟೆ, ನೀರು ಕುಡಿಯುವ ಪಾತ್ರೆ-ಲೋಟ ಇವುಗಳಿಂದ ತುಂಬಿಹೋಗಿತ್ತು. 'ನಾನು ಮನೆಯಲ್ಲಿಲ್ಲದಾಗ ಎಷ್ಟೊಂದು ಚಹ-ಫರಾಳ, ಏನಿದು ಅಪವ್ಯಯ!' ಎಂಬ ಭಾವನೆ ಮನಸ್ಸಿಗೆ ಬಾಧೆ ಕೊಟ್ಟಿತು.

ಒಂದೊಂದು ದಿನ—ಅದೇನು ಆ ದಿನದಲ್ಲಿ ನಮ್ಮ ಗ್ರಹಗತಿಯೆ ಹಾಗಿರುವುದೊ ಏನೋ!—ಯಾವುದೂ ನಮಗೆ ಅನುಕೂಲವಾಗಿ, ಸುಖಕರವಾಗಿ ಇರುವುದಿಲ್ಲ. ಅಂದು ಬೆಳಗಿನಿಂದ ಮನಸ್ಸಿಗೆ ವಿರುದ್ಧವಾದ ಸಂಗತಿಗಳೇ ಜರುಗುತ್ತ ಬಂದಿದ್ದುವು. ರಾತ್ರಿ ಮನೆಗೆ ಬರುವಾಗ, ನಿಷ್ಕಾರಣವಾಗಿ ನನ್ನೊಬ್ಬ ಸ್ನೇಹಿತನ ಜೊತೆಗೆ ಒಂದು ವಿಷಯದಲ್ಲಿ ವಾದಕ್ಕೆ ಬಿದ್ದು ಚುಚ್ಚುಮಾತನ್ನಾಡಿಸಿಕೊಂಡಿದ್ದೆ, ಅಸಮಾಧಾನದ ಮನಸ್ಥಿತಿಯಲ್ಲಿಯೇ ಮನೆಗೆ ಬಂದೆ. ಹೆಂಡತಿಯನ್ನು ಕೇಳುವಾಗಲೆ ಮಾತು ತುಸು ಬಿರುಸಾಗಿ ಬಂತು.

"ಅಡಿಗೀಮನ್ಯಾಗ ಚಹಾದ ರಂದಿ ಹರವೀರಿ! ಯಾರು ಬಂದಿದ್ದರು ಚಹಾಕ್ಕ?" ನಾನು ಗುಡುಗುಹಾಕಿದೆ.

"ಬರೋವರೇ ಬಂದಿದ್ದರು! ಅದನ್ನ ತೊಗೊಂಡು ನಿಮಗೇನು ಮಾಡೋವದ?" ಆಕೆ ಜವಾಬು ತೋರಿಸಿದಳು.

"ಅಂದರ? ನಾ ಮನ್ಯಾಗಿಲ್ಲದಾಗ ಬರೋವರು ಬ್ಯಾರೇ ಇದ್ದಾರೇನು?"

"ಈ ಮಾತಿನ ಅರ್ಥ ಎಲ್ಲಿಗೆ ಮುಟ್ಟತದ ನೀವೇ ವಿಚಾರಮಾಡಿರಿ!"

"ಮತ್ತ ನಿನ್ನ ಮಾತಿನ ಅರ್ಥ ಏನಾಗ್ತದ ಅಂಬೋದು ನೀ ವಿಚಾರ ಮಾಡೀಯೇನು? 'ಬರೋವರು ಬಂದಿದ್ದರು' ಅಂದರ ಏನಂಬೋ ಅರ್ಥ?"

"ಬರೊವರು ಅಂದರ ನಮಗ ಬೇಕಾದವರು! ನಿಮ್ಮ ಕಡಿಗೆ ಹ್ಯಾಂಗ ನಿಮ್ಮ ಮಂದಿ ಬರ್ತಾರ, ಹಾಂಗ ನಮ್ಮ ಕಡಿಗೆ ನಮ್ಮ ಮಂದಿ ಬರ್ತಾರ!"

"ಅದೇ ಅಲ್ಲಾs ಅಂಬೋದು!"

"ಇಂಥಾ ಅಸಹ್ಯ ಮಾತು ನನಗೆ ಸಹನಾಗೋದಿಲ್ಲ ನೋಡ್ರಿ!"

"ಅಲ್ಲ, ತಪ್ಪು ಮಾತು ಮೊದಲು ನಿನ್ನ ಬಾಯಿಂದ ಬಂತೊ ನನ್ನ ಬಾಯಿಂದ ಬಂತೋ?"

"ನಾಯೇನು ತಪ್ಪು ಮಾತಾಡಿದೆ? ನನ್ನ ಮಾತಿಗೆ ಹತ್ತಬಾರದ ಅರ್ಥ ಹಚ್ಚಿದ್ದು ನೀವೋ....ನಾನೊ?"

"ಮೊದಲು ಅಂಥಾ ಅರ್ಥ ಬರೋಹಾಂಗ ಮಾತಾಡಿದ್ದು ನೀನೋ ನಾನೊ?"

"ಈ ಮಂಗನ ಮಲ್ಲಿನಾಥತನ ಸಾಕು! ಅಂಗೀ ಕಳದು ಊಟಕ್ಕೇಳ್ರಿ"

"ನಾ ಊಟಾ ಮಾಡೋದಿಲ್ಲಿವತ್ತ!"

"ಅಂದರೇನಿದು? ಮನ್ಯಾಗ ಕಾಲಿಡೋ ಪುರಸತ್ತಿಲ್ಲದ ಈ ಎಡವಟ್ಟು ಮಾತ್ಯಾಕ ಸುರು ಆಗ್ಯಾವ?"

"ಎಡವಟ್ಟು ಮಾತು ಸುರುಮಾಡಿದ್ದು ಮೊದಲು ನಾನಲ್ಲ; ನೀನು! ಚಹಾಕ್ಕ ಯಾರು ಬಂದಿದ್ದರು ಅಂತ ಕೇಳಿದರ ಏನು ಬೊಗಳಿದಿ?"

"ಅಷ್ಟು ವಟ್ರಿಸಿಕೊಂಡು ಕೇಳಲಿಕ್ಕೆ ಏನಾತದರಾಗ? ಸಮಾಧಾನ ದಿಂದ ಕೇಳಿದ್ದರ ಹೇಳ್ತಿದ್ದಿಲ್ಲೇನು? ನಾ ಒಂದಿನ ಮಂದಿಗೆ ಚಹಾ ಕೊಟ್ಟರ ಇಷ್ಟು ಸಿಟ್ಟು ಬನತದ. ನೀವು ದಿನಾ ಹಾದೀಲೆ ಹೋಗೋವರನೆಲ್ಲಾ ಹಾಟೆಲಿಗೆ ಒಯಿತೀರಲ್ಲ? ಯಾಕ ಹಾಂಗ ಖರ್ಚುಮಾಡ್ತೀರಿ-ಅಂತ ನಾ ಯೇನಾರ ಕೇಳ್ತೇನೇನು ನಿಮ್ಮನ್ನ?"

ನನ್ನ ಕೇಳ್ಳಿಕ್ಕೆ ಅಧಿಕಾರ ಎಲ್ಲದ್ಯ ನಿನಗ?''

''ಹುಂ ಇರಲಿಕ್ಕಿಲ್ಲ....ಪಾಪ!''

"ನಾವು ಗಳಿಸ್ತೀವಿ; ಖರ್ಚುಮಾಡ್ತೀವಿ!"

''ಗಂಡಸಂಗದೊಂದು ಜಂಭ! ನಾವು ಮನ್ಯಾಗ ಸಾಯಬೀಳ ದುಡೀದಿದ್ದರ ನೀವು ಗಳಿಸೋದೆಲ್ಲ ಹೋಗ್‌ತಿತ್ತು ಹಳ್ಳಾ ಹಿಡಿದು!''

''ಮನಿ ನಿಮಗs ಬಿಟ್‌ಬಿಟ್ಟರ ಹಳ್ಳಾನs ಹಿಡಿಸವರು ನೀವು! ನಾವು ನಮ್ಮ ಕಣ್‌ಬೆದರಿಕಿ ಇಟ್ಟಿರ್ತೀವಿ ಅಂತ.... .... ...''

''ಉಂ, ಬಹಾಳ ನಿಮ್ಮ ಕಣ್‌ಬೆದರಿಕಿ! ನಾವು ಖರ್ಚು ಮಾಡಲಿಕ್ಕ ನಿಂತರ ನೀವು ತರೋದು ಒಂದು ದಿವಸಕ್ಕ ಸಾಲಲಿಕ್ಕಿಲ್ಲ!''

''ಈಗ ಅದs ಪರಿಸ್ಥಿತಿ ಬಂದsದ! 'ದಿವಸದಾಗ ಮೂರನೇ ಸಾರಿ ಚಹಾ ಮಾಡಬ್ಯಾಡ' ಅಂತ ಇದು ಮೂವತ್ತನೇ ಸಲ ಹೇಳಿದ್ದು ನಾನು! ಆದರೂ ನಿನ್ನ ಮಂಡತನ ನೀಯೇನೂ ಬಿಡವೊಲ್ಲಿ!"

ಅಪರೂಪದ್ಹಾಂಗ ಯಾರಾದರೂ ಬಂದರ ಹಾಂಗs ಕಳಿಸೋ ದದsನ? ನಿಮಗೊಂದು ಚಹಾದಂಗಡಿ ಅವ, ನಾವೇನು ಮಾಡಬೇಕು?

''ಬಂದವರಿಗೆ ಅರಿಸಿಣ, ಕುಂಕುಮ ಹಚ್ಚಬೇಕು, ಕಳಿಸಬೇಕು! ಹೆಂಗಸರಿಗೆ ಅದರಷ್ಟು ಪ್ರೀತಿ ಬ್ಯಾರೆ ಏನುಕೊಟ್ಟರೂ ಆಗೋದಿಲ್ಲ. ಇಷ್ಟಾಗಿ ನಿನ್ನಕಡಿಗೇನು ಕಲೆಕ್ಟರ್ ಬರೂದಿಲ್ಲ, ಕೌನ್ಸಿಲರ್ ಬರೂದಿಲ್ಲ. ಹೆಂಗಸರೊಳಗ ಬಹಾಳ ದೊಡ್ಡವರು ಅಂತ ಬಂದರ....ಆ ಶತಾವರಿ ಶಕುಂತಲಾಬಾಯಿ, ನೀರಾವರಿ ಗೋದಾವರಿಬಾಯಿ; ಪಾಪ, ಆ ಇಬ್ಬರಿ ಗಂತೂ ಕುಂಕುಮ ಕೂಡ ಬೇಕಾಗೋದಿಲ್ಲ!

"ಯಾಕ, ಬಹಾಳ ಬಾಯಿ ಬಿಟ್ಟೀರಿವತ್ತ?''

''ಬಾಯಿ ಬಿಡೋಹಾಂಗ ಮಾಡ್ತೀರಂತ ಬಾಯಿಬಿಡ್ತಿವೀ !"

''ನಿಮ್ಮ ಗಂಡಸರದೆಷ್ಟು ನೋಡ್ರಿ, ಎಲ್ಲಾ ತಮ್ಮದೇ ಪಕಟಂಗ ಆಗಬೇಕು; ಒಂದು ಕಪ್ ಚಹಾ ಕೊಡಲಿಕ್ಕೆ ಕೂಡ ನಮಗ ಪರಾಧೀನ! ಸ್ವೇಚ್ಛೆ ಅಂತ ಅನಿಸಿಕೊಂಡು ಹೆಣಾ ಬೀಳೋವರಿಗೂ ದುಡಿಯೋದಷ್ಟs ನಮ್ಮ ಹಣೆಬರದಾಗ ಬರದ್ಹಾಂಗ ಕಾಣಸ್ತsದ!''

"ಹೆಂಡರ್ನ ಹಾಂಗಿಟ್ಟ ಗಂಡಸರೂ ಇದ್ದಾರ; ನಾ ಹಾಂಗಿಲ್ಲಲ್ಲ!''

"ಅಷ್ಟು ಸ್ವಾತಂತ್ರ್ಯ ಕೊಟ್ಟವರು ಹೀಂಗ-ಕೇಳತೀರ್ಯಾಕ ಹಂಗಾರ?"

"ಅದನ್ನ ಸರಿಯಾಗಿ ನಡಿಸ್ತೀರೋ ಇಲ್ಲೋ ಅಂತ ಕೇಳ್ತೀವಿ; ಕೇಳಿದರ ಸಿಟ್ಟ್ಯಾಕ ಬರಬೇಕು?"

"ಕೇಳೋ ಹಾಂಗ ಕೇಳಿದರ ಸಿಟ್ಟ್ಯಾಕ ಬರ್ತsದ? ನೀವು ಕೇಳಿದ್ದ ರಾಗ, ನಾ ಚಹಾ ಕೊಟ್ಟದ್ದ ತಪ್ಪು-ಅಂಬೋ ಧ್ವನಿ ಇತ್ತು ಅದಕ್ಕ ಸಿಟ್ಟು ಬಂತು!"

"ಅಬಬಬಬಬ! ಶಬ್ದದೊಳಗಿನ ಧ್ವನಿಕೂಡ ತಿಳೀಲಿಕ್ಕೆ ಹತ್ತ್ಯೇನ್ನಿ ನಗ? 'ಕಾವ' ಪರೀಕ್ಷಕ್ಕ ಕೂಡಲಿಕ್ಕೆ ಅಡ್ಡಿಯಿಲ್ಲ ನೀನು!"

"ನಾ ಕೂಡಲಿ ಬಿಡಲಿ. ನೀವು ಮಾತ್ರ ಜಾಣರಾಗೀರಲ್ಲ ಮಾತು ತಿರಳಿಸಲಿಕ್ಕೆ! ಮಾತ್ಹೊಂದಲ್ಲ, ಮಗದೊಂದಲ್ಲ; ಒಂದು ಚಹಾಕ್ಕ ಸಾವಿರ ಮಾತಾಡಿದಿರಿ. ಅದೂ ಅಷ್ಟಂತ ಬರೋವರಿಗೆ ನಾ ಎಂದೂ ಕೊಡ್ತಿರೋದಿಲ್ಲ! ಇವತ್ತ ದಾರಿತಪ್ಪಿ, ಆ ಅರಹೊಟ್ಟಿ ಅಪಣ್ಣಾಚಾರ ಹೆಂಡತಿ ಸೊಸಿನ್ನ ಕರಕೊಂಡು ಭೆಟ್ಟಿಗೆ ಬಂದಿದ್ಲು. ಆಕೀ ಸಂಗತಿ ನಾಕು ಮಕ್ಕಳೂ ಬಂದಿದ್ವು ಏಳೆಂಟುಕಪ್ ಚಹಾ, ಅಷ್ಟು ಅವಲಕ್ಕಿ ಮಾಡಿದ್ದೆ. ಕೊಡಬೇಕಂಬರ ಸುಡಲಿ, ಬ್ಯಾರೆಯೇನೂ ಇಟ್ಟಿದ್ದಿಲ್ಲ; ಏನು ಮಾಡಬೇಕು ಹಂಗಾರ?"

"ಇಷ್ಟು ಕೊಟ್ಟದ್ದು ಸಾಲದೇನು? ಮತ್ತೇನು ಕೊಡಬೇಕಂತ ಮಾಡಿದ್ದಿ? ಏಳೆಂಟು ಕಪ್ ಚಹಾ ಅಂದರ ಮೂರು ದಿನದ ಸಕ್ಕರಿ ಒಕ್ ಅಂದು ಹೋತ್ತು! ರೇಶನ್ ಆಫೀಸರ ನಮ್ಮ ಮಾವಾಗಿಸ್ದರ, ನೀ ಎಷ್ಟು ಸಕ್ಕರಿ ಖರ್ಚು ಮಾಡಿದ್ದರೂ ನಾ ದರಕಾರ್ ಮಾಡ್ತಿದ್ದಿಲ್ಲ; ಮಗಳಿಗೆ ಅಂತ ಸಕ್ಕರಿ ಇಲ್ಲದಿದ್ದರ ಕೊನೀಗೆ ಬೆಲ್ಲಾನಾದರೂ ಕೊಡ್ತಿದ್ದನಲ್ಲ?"

"ಅವನ ತಲಿ ಬೋಳಿಸಿತು. ಅವ ಯಾಕ ನಮ್ಮಪ್ಪಾಗತಾನ? ಈ ಚುಚ್ಚುಮಾತು ನನಗೂ ತಿಳಿತಾವ; ನಿಮ್ಮ ಎಂಟು ಕಪ್ಪಿನ ಸಕ್ಕರಿ ಹೌದಲ್ಲೊ ನಾ ಹ್ಯಾಂಗಾದರೂ ತರ್ತೀನಿ"

"ಹ್ಯಾಂಗಾದರೂ ಹ್ಯಾಂಗ ತರೋದು? ತಂದರ ಕಡಾನs ತರೋದು! ಕಳವು ಬ್ಯಾರೆ ಮಾಡೋ ಹಾಂಗಿಲ್ಲs? ಕಡಾ ತಂದರಾದರೂ ತಿರಿಗಿ ಕೊಡಬೇಕಲ್ಲ? ಮತ್ತ ಕಡಿಮಿ ಬೀಳೋದs!"

"ನಾ ಎಲ್ಲಾ ಬೀಳದ್ಹಾಂಗ ಮಾಡ್ತೇನಿ ಅಂದರಾತ್ಯೋ ಇಲ್ಲೋ! ನಾ ಚಹಾ ಕೊಟ್ಟೆನಲ್ಲಾ ಅಂತ ನಿನಗೆ ಸಂಕಟ! ಇನ್ನ ಮನೀಗೆ ಬಂದವರಿಗೆ ಚಹಾ ಮಾಡಿದರ ಕೇಳ್ರಿ! ನಿಮ್ಮವರಿರಲಿ, ನನ್ನವರಿರಲಿ,— ಚಹಾ ಅಂತ ಮಾಡೋಹಾಂಗಿಲ್ಲ.!"

"ಅದ್ಯಾಕ? ನಾಳೆ ಮಂಗಳವಾರ ಅಲ್ಲs?... ನಾಳೇ ಇಬ್ಬರು ಚಹಾಕ್ಕ ಬರೋವರಿದ್ದಾರ. ರೇಶನ್ ಬರೋದಕ್ಕಿಂತಾ ಮುಂಚೇ ಆಮಂತ್ರಣ ಕೊಟ್ಟೇನವರಿಗೆ!"

"ಕೊಟ್ಟಿದ್ದೀರಿ! ಅವರು ಚಹಾಕ್ಕ ಬರೋದ್ಹಾಂಗಿರಲಿ; ಮಂಗಳವಾರ ಅಂದರ ನೆನಪಾತ್ಯು! ಮುಂದಿನವಾರ ಗೌರೀಹಬ್ಬ ಬಂತು, ನಾಳೆ ನಾಕು ಸೇರು ಜೆಣ್ಣೆ ಹೆಚ್ಚಿಗೆ ಬೇಕು!"

"ಅದೆಲ್ಲಾ ಸುಳ್ಳು! ಗೌರಿ-ಗಂಗಿ ನಮಗ ಸಂಬಂಧಿಲ್ಲ. ಎಲ್ಲಾ ದೇವರ್ನೂ ನಾವು ವಾರಾ ತೊಗೊಂಬೋ ಮೂರು ಸೇರಿನ್ಯಾಗs ಮುಗಿಸಬೇಕ.!

"ಮೂರು ಸೇರಿನ್ಯಾಗ ಗೌರಿ-ಗಣಪ್ಪಾ ಹ್ಯಾಂಗಾಗ್ತsದದು? ದಿನ ಪ್ರತಿ ಊಟಕ್ಕs ತಿಟಮಿಟಿ ಆಗ್ತsದ!"

"ಮಾಡಿದರೆಲ್ಲಾ ಆಗ್ತsದ; ಆಗದೇನು ಮಾಡ್ತದ? ಇನ್ನ ನೀ ಹೆಚ್ಚಿಗೇನsಬೇಕು ಅಂದರ ನನ್ನ ಶ್ರಾದ್ಧಾಗ್ತದ! ಅಷ್ಟೇ!"

"ಅಲ್ಲ. ಏನಿವು ಅಸಹ್ಯ ಅಸಹ್ಯ ಮಾತು? ಹಿಂಗೇನರs ಅಕಳಾ ಸಕಳಾ ಮಾತಾಡಬ್ಯಾಡ್ರಿ ನೋಡ್ರಿ! ತರೋದೇನು ತಪ್ಪೂದಿಲ್ಲ, ಆಗೋದೇನು ನಿಲ್ಲೂದಿಲ್ಲ. ಮನಸು ನೊಯಿಸತೀರಷ್ಟs ಮಾತಾಡಿ! ಇದುವರೆಗೆ ಯಾವ ಹಬ್ಬ ಆಗದ ನಿಂತsದ?"

"ನಾ ತರದಿದ್ದರ ಹ್ಯಾಂಗಾಗ್ತದೋ ನೋಡ್ತೇನಿ!"

"ತರಬಾರದು ಅಂತ ನಿಮ್ಮ ಹಟಾನs ಇದ್ದರ ಆಗಲಿ ಹಂಗಾರ!"

"ಆಗಲಿ ನನ್ನ ಹಟಾ ನಡೀತದೊ, ನಿನ್ನ ಹಟಾ ನಡೀತದೊ ನೋಡೇ ಬಿಡೋಣ!"

"ನನ್ನ ಹಟಾ ನಾ ಏನು ನಡಿಸಲಿಕ್ಕೆ ಕೂತಿಲ್ಲ. ಯಾವಾಗ್ಲೂ ಗಂಡಸರ ಹಟಾನೇ ನಡಿಯೋದು! ನಮ್ಮದೇನು ನಡೀತsದ? ಎಲಿ ಮ್ಯಾಲ ಕೂತಾಗ

ತುಪ್ಪಾ ಕೇಳ್ರಿ, ಆಗ ಹೇಳ್ತೀನಿ! ಎರಡು ಸೌಟು ಹಾಕೊ ಅಲ್ಲಿ ಅರ್ಧಾ ಸೌಟು ಕಮ್ಮಿ ಹಾಕಿದರ, ಕಿಡಿಕಿಡಿ ಹಾಯ್ ತಿರ್ತೀರಿ! ಈಗ ನಾಕುಸೇರು ಹೆಚ್ಚಿಗೆ ಬೇಕು ಅಂಬೋದು ನಾವು ತಿನಲಿಕ್ಕಲ್ಲ; ನಿಮಗs ಬೇಕಾಗ್ತsದ! ನಮಗೇನು ಒಣಾದಿದ್ದರೂ ನಡೀತದ.''

''ನಮಗೂ ನಡೀತsದ''

'ಆಗಲಿ ಹಾಂಗಾದರ; ನಾರಾ ತರೋ ಅಷ್ಟs ತರ್ರಿ. ಅಷ್ಟರಾಗs ಮಾಡೋದು ಹೌದಲ್ಲೊ?''

' ಹೌದು, ಅಷ್ಟರಾಗs ಮಾಡೋದು!''

''ಹತ್ತು ಹೊಡೀತು. ಊಟಕ್ಕರs ಏಳ್ತೀರೊ?

''ಉಂ, ಎಲಿ ಹಾಕು!

' ಹಾಕಿ ತಯಾರದ. ಅನ್ನಾ ತೋಡೋದೊಂದs ಬಾಕಿ!

ನಾನು ಎಲೆಯಮೇಲೆ ಬಂದು ಕುಳಿತೆ. ಆಕೆ ಅನ್ನಬಡಿಸಿ ತುಪ್ಪವನ್ನು ತಂದಳು ಪ್ರತಿದಿನ ಬಡಿಸುವಂತೆ ಎರಡು ಸೌಟು ಹೆತ್ತುಪ್ಪವನ್ನು ಅನ್ನದ ಮೇಲೆ ನೀಡಿ ಆಕೆ ಹೋಗಬೇಕಿತ್ತು; ಅಂದು ಹಾಗೆ ಮಾಡಲಿಲ್ಲ. ಒಂದು ಸಣ್ಣ ಕಡಲೆಕಾಯಿಯಷ್ಟೇ ತುಪ್ಪವನ್ನು ಬರಣಿಯಿಂದ ತೆಗೆದು ಅನ್ನದ ಬದಿಗೆ ಇಟ್ಟಳು. ನಾನು ಆಕೆಯನ್ನು ನೋಡಲೆಣಿಸಿ ಮುಖ ಮೇಲಕ್ಕೆತ್ತಿದೆ. ಆಕೆ ಭರ್ರನೆ ಮುಖ ತಿರುಗಿಸಿ ಸಾಗಿಬಿಟ್ಟಿದ್ದಳು. ನನ್ನ ಮಂತ್ರ ನನಗೇ ಇಷ್ಟು ಬೇಗ ತಿರುಗಬಹುದೆಂದು ನಾನು ಅಂದುಕೊಂಡಿರಲಿಲ್ಲ. ನನ್ನ ಸ್ವಾಭಿಮಾನಕ್ಕೆ ಚುಚ್ಚಿದ ಹಾಗಾಯಿತು. ''ಓಹೊ ನಾನು ಬೆಣ್ಣೆ ಬೇಡೆಂದದ್ದಕ್ಕೆ ಈ ಆಟ ಹೂಡಿದಳೇನು?'' ಎಂದು ಮನಸ್ಸಿನಲ್ಲಿ ಎಂದುಕೊಂಡು, ಆ ತುಪ್ಪದ ಗುಳಿಗೆಯನ್ನು ತೆಗೆದು ಉಪ್ಪಿನ ಮಗ್ಗುಲಲ್ಲಿಟ್ಟೆ. ನಾನು ಅನ್ನದ ಮೇಲೆಯೆ ದೃಷ್ಟಿಯನ್ನು ಏಕೀಕರಿಸಿ, ಒಣ ಅನ್ನವನ್ನೇ ಕಲಸುತ್ತಿದ್ದೆ. ಆಕೆ ಹುಳಿ ತಂದು ಬಟ್ಟಲಲ್ಲಿ ಬಡಿಸಿದಳು. ನಾನು ತುಪ್ಪ ತೆಗೆದಿಟ್ಟಿದ್ದನ್ನು ನೋಡಿ ಆಕೆ ಏನಾದರೂ ಕೇಳಬಹುದು ಎನಿಸಿತ್ತು, ಅಥವಾ ಆಕೆ ಕೇಳಬೇಕು ಎಂದೂ ನನಗೆ ಎನಿಸಿತ್ತು. ಆದರೆ ಆಕೆ ನೋಡಿಯೂ ನೋಡದ ಹಾಗೆ ತಿರುಗಿ ಹೋಗಿ ತನ್ನ ಜಾಗದಲ್ಲಿ ಕುಳಿತಳು. ಎಂಥ ಕೆಟ್ಟವಳು ನೋಡಿ! ನನ್ನ ಮೂವತ್ತು ವರ್ಷದ ಆಯುಷ್ಯದಲ್ಲಿ ಒಂದು ಸಲವೇನೂ ನಾನು ಹೀಗೆ ಒಣ ಅನ್ನ ಉಂಡಿರಲಿಲ್ಲ. ನನ್ನ,

ತಾಯಿ ಇದ್ದರೆ ಹೀಗೆ ಮಾಡುತ್ತಿದ್ದಳೆ? ' ಎನಿಸಿತು! ಎರಡು ತುತ್ತು ಅಂಥ ದನ್ನೆ ಬಾಯಲ್ಲಿ ತುರುಕಿದೆ. ಅಗುಳು ಗಂಟಲಲ್ಲಿ ಸುತ್ತಾಡಹತ್ತಿದುವು. ಒಂದು ಬಿಕ್ಕು ಬಂತು. ನೀರು ಕುಡಿದು ಅದನ್ನು ಸಿಲ್ಲಿಸಿದೆ. ಆಕೆ ನನ್ನ ಭಾವ-ಭಂಗಿಗಳನ್ನು ತುಂಟನೋಟದಿಂದ ನೋಡುತ್ತಿದ್ದಳು. ನನಗೆ ಇನ್ನಷ್ಟು ಕೆರಳಿತು. ಬಟ್ಟಲ ತುಂಬ ಇದ್ದ ಹುಳಿಯನ್ನು ಅನ್ನದ ಮೇಲೆ ಸುರಿದುಕೊಂಡೆ. ಅದು ಎಲೆಯ ತುಂಬ ಹರಿದಾಡಹತ್ತಿತು. ಅಷ್ಟು ಹೊತ್ತಿಗೆ ನಾನು ತುಪ್ಪ ಬಿಟ್ಟಿದ್ದನ್ನು ಆಕೆ ನೋಡಿರಬೇಕು–' ತುಪ್ಪ ಹಾಕೇಪ ' ಎಂದಳು. ನಾನು ಹುಂ ಇಲ್ಲ, ಹಾಂ ಇಲ್ಲ, ಸುಮ್ಮನಿದ್ದೆ. ಅನ್ನ ಮುಗಿಯಿತು. ಚಪಾತಿ ತಂದು ಎಲೆಯಲ್ಲಿ ಹಾಕಿದಳು. ಅದನ್ನು ತುಪ್ಪವಿಲ್ಲದೆ ತಿನ್ನುವುದು ಹೇಗೆ? ಜೋಳದ ರೊಟ್ಟಿ ಇದ್ದರೆ ತಿನ್ನಬಹುದು. ಚಪಾತಿಯನ್ನು ತಿನ್ನಬೇಕೋ ಬಿಡಬೇಕೋ ಎಂಬ ವಿಚಾರದಲ್ಲಿದ್ದೆ. ಆಕೆ ಅಷ್ಟರಲ್ಲಿ ತುಪ್ಪ ತಂದಳು ಪೇರಲ ಕಾಯಷ್ಟು ತುಪ್ಪದ ಕರಣಿ ಕೈಯಲ್ಲಿ ಕಾಣುತ್ತಿತ್ತು.

' ಹಾಕಬ್ಯಾಡ! ' ನಾನು ಗದ್ದರಿಸಿದೆ.

' ಯಾಕ? '

' ನನಗ ಬ್ಯಾಡ ! '

ಹಾಕಿದರೂ ತಿನ್ನುವದಿಲ್ಲ ಎಂದೆನಿಸಿತೇನೊ ! ತುಪ್ಪದ ಕರಣಿಯನ್ನು ಬರಣಿಯಲ್ಲೆಸೆದು ಹಿಂತಿರುಗಿದಳು. ತುಪ್ಪ ತಿನ್ನದಿದ್ದರೆ ಬೆಣ್ಣೆಯನ್ನಾ ದರೂ ತಿನ್ನಬಹುದು ಎಂದುಕೊಂಡು, ಅಂದೇ ಮನೆಯಲ್ಲಿ ಕಡೆದ ಬೆಣ್ಣೆ ಯನ್ನು ತಂದಳು! ಆದರೆ ನನ್ನಲ್ಲಿ ಜಗಳ ಬಂದದ್ದು ಬೆಣ್ಣೆಗಾಗಿಯೆ ಬಂದಿತ್ತು. ಅದನ್ನಂತೂ ಮೊದಲು ತಿನ್ನುವ ಹಾಗಿಲ್ಲ!

" ನೀನು ಹಾಕಬ್ಯಾಡ. ನಾ ತಿನ್ನೂದಿಲ್ಲ!" ಆಕ್ರೋಶ ಮಾಡಿದೆ. ನನ್ನ ಆಕ್ರೋಶಕೇಳಿ ಆಕೆ ತೆಪ್ಪಗ ಹೋದಳು. ಇಷ್ಟಾಗುವ ಹೊತ್ತಿಗೆ ನಮ್ಮಾಕೆ ಝುರ್ರನೆ ಇಳಿದಂತಾಗಿ ಅಳುವ ಸ್ಥಿತಿಗೇ ಬಂದಿದ್ದಳು! ನಾನು ಯಾವು ದನ್ನೂ ಲಕ್ಷಿಸದೆ, ಚಪಾತಿಯನ್ನು ಬದಿಗಿರಿಸಿ, ಕೊನೆಯ ಅನ್ನ ಹಾಕಿಸಿ ಕೊಂಡು ಹ್ಯಾಗೋ ಊಟ ಮುಗಿಸಿದೆ.

* * * * * *

ಮರುದಿನ ಬೆಳಗ್ಗೆ ಚಹಕ್ಕಾಗಿ ನಾನು ಒಳಗೆ ಹೋಗಲಿಲ್ಲ. ಕಾಗದ ಇಟ್ಟುಕೊಂಡು ಒರೆಯುತ್ತ ಕುಳಿತೆ. ನನ್ನ ಏಳು ವರ್ಷದ ಮಗು ಚಹ

ತಂದು ಕೊಟ್ಟಿತು ನಾನದನ್ನು ನೋಡಿದರೂ ಕುಡಿದಿರಲಿಲ್ಲ. ಆಕೆ ಅಡಿಕೆಯ ಡಬ್ಬಿಯನ್ನು ಕೈಯಲ್ಲಿ ಹಿಡಿದು ಬಾಗಿಲಿಗೆ ಮರೆಯಾಗಿ ನಿಂತಿದ್ದಳು. ನಾನು ಹಾಗೆ ಹೀಗೆ ನೋಡಿ ಚಹ ಕುಡಿದು ಮುಗಿಸಿದೆ. ಚಹಾ ಮುಗಿದ ವೇಳೆ, ಅಡಿಕೆ ಪುಡಿಯನ್ನು ತೆಗೆದು ನನಗೆ ಕೊಡಲು ಆಕೆಯೆ ಬಂದಳು ಅವಳ ಕಣ್ಣತುಂಬ ನೀರು ತುಂಬಿಕೊಂಡಿತ್ತು. ಮಾತು ಹೊರಬರುವಾಗ ಧ್ವನಿ ಕಂಪಿಸಿತು. ತುಟಿ ನಡುಗಿದುವು.

“ನಂದು ತಪ್ಪಾತ್ಯ. ನಿನ್ನೆ ನಾ ಹಾಂಗಮಾಡಬಾರದಿತ್ತು. ನೀವ್ರ ಸರಿಯಾಗಿ ಊಟ ಕೂಡ ಮಾಡಲಿಲ್ಲ. ನನಗೂ ಊಟಕ್ಕ ಮನಸ್ಸಾಗಲಿಲ್ಲ. ಹಾಗೇ ಮಲಗಿದೆ!” ಎನ್ನುವಾಗ, ಅನುತಾಪದಿಂದ ಅವಳು ಅದೆಷ್ಟು ಕರಗಿಹೋಗಿದ್ದಳು.

“ಈಗ ಚಹಾ ಕುಡಿದ್ಯೊ ಇಲ್ಲೋ?” ಒಮ್ಮೆಲೆ ನನ್ನ ಬಾಯಿಂದ ಬಂತು.

ಅವಳ ಅವನತ ದೃಷ್ಟಿ, ಮೂಕಭಾವ ನಕಾರವನ್ನು ಸೂಚಿಸಿದುವು ನನಗೆ ಹೇಗೋ-ಆಯಿತು. ನಾನೂ ಹೃದಯದಲ್ಲಿ ಅವಳಷ್ಟೇ ಕರಗಿದೆ.

“ಹೋಗು, ಚಹಾ ಕುಡಿ ಹೋಗು! ಹಾಂಗs ಹೇಳಿದರ ನೀ ಕುಡೀಲಿಕ್ಕಿಲ್ಲ; ನಾನೂ ಬರ್ತಿನಿ ನಡಿ!” ಎಂದು ಅವಳನ್ನು ಕೈ ಹಿಡಿದು ಕರೆದೊಯ್ದೆ— ಆದರೆ ಅವಳಿಗಾಗಿ ಅಲ್ಲಿ ಚಹಾ ಎಲ್ಲಿತ್ತು ?

“ನಿನಗಾಗಿ ನೀ ಚಹಾ ಮಾಡಿಕೊಂಡಿಲ್ಲ, ಹೌದಲ್ಲೋ? ಗೊತ್ತು ನನಗ–ಚಹಾ ಬ್ಯಾಡ–ನಿನ್ನೆ ರಾತ್ರಿ ಉಪಾಸಿದ್ದೀ- ಹಾಲು ತೊಗೊ!” ಎಂದು ನಾನೇ ಬಿಸಿಬಿಸಿ ಹಾಲನ್ನು ಕಪ್ಪಿನಲ್ಲಿ ಹಾಕಿ ಅವಳಮುಂದೆ ಹಿಡಿದೆ; ಆದರೆ ಒಬ್ಬಳೇ ಹಾಲು ಕುಡಿಯುವುದಕ್ಕೆ ಆಕೆಗೆ ಮನಸ್ಸಾಗ ಬೇಕಲ್ಲ! ನನಗೂ ಆಗ್ರಹ ಮಾಡಿದಳು. ಮಕ್ಕಳೊಂದಿಗೆ ಇಬ್ಬರೂ ಹಾಲು ಕುಡಿದೆವು

ಮಧ್ಯಾಹ್ನ ಬೆಣ್ಣೆಯ ಮುದುಕಿ ಬೆಣ್ಣೆ ಎಷ್ಟು ಬೇಕು ಎಂದು ಕೇಳ ಬಂದಳು. ಯಾವಾಗಲೂ ಈಕೆಯನ್ನೇ ಕೂಗಿ ಕೇಳುವ ವಾಡಿಕೆ ಅವಳದು. ಅವಳು ಬರುತ್ತಲೇ ನಾನು ಕೈಸನ್ನೆ ಮಾಡಿ ಸುಮ್ಮಗಿರಿಸಿ ನಾನೇ ಮೆಲ್ಲಗೆ ಹೇಳಿದೆ: ‘ಈ ವಾರ ಎಂಟು ಸೇರು ಬೇಕು!’

ಊಟಕ್ಕೆ ಕುಳಿತಾಗ ಈಕೆ 'ಬೆಣ್ಣೆಯ ಮುದುಕಿ ಬರಲೇ ಇಲ್ಲ!' ಎಂದಳು. 'ಬಂದಿದ್ಲು, ಹೇಳೀನಿ.' ನಾನೆಂದೆ. ಎಷ್ಟು ಎಂದು ಆಕೆಯೂ ಕೇಳಲಿಲ್ಲ; ನಾನೂ ಹೇಳಲಿಲ್ಲ.

ಸಾಯಂಕಾಲ ಮುದುಕಿ ಬೆಣ್ಣೆಯನ್ನು ತಂದು ಈಕೆಯ ಮುಂದಿಟ್ಟಳು.

"ಎಷ್ಟು ತಂದಿ?" ಕೇಳಿದಳೀಕೆ.

"ಎಂಟು ಸೇರು!" ಮುದುಕಿ ಹೇಳಿದಳು

"ಇಷ್ಟ್ಯಾಕ ತಂದಿ? ಯಾರು ಹೇಳಿದರು?"

' ಅಲ್ಲಿ ಕುಂತಾನ್ನೋಡು, ನಿಮ್ಮ ಹಿರಿಯ; ಅವನ್ನs ಕೇಳು. ಎಂಟು ಸೇರು ಅಂತ ಸನ್ನೀಮಾಡಿ ಹೇಳಿದ್ನವ್ವಾ. ಅಂವ ಹೇಳಿದಷ್ಟು ತಂದೆ! ಇದರಾಗ ನಿನಗ ತಿಳೀದ್ಹಾಂಗ ಇನ್ಯಾವಾಕಿಗೆ ಕೊಡಬೇಕಂತ ಮಾಡಿದ್ನೊ ಯಾರಿಗ್ಗೊತ್ತು?"

ಅವಳ ಮಾತಿಗೆ ನಾನೂ ನಕ್ಕೆ; ಈಕೆಯೂ ಬಿದ್ದು ಬಿದ್ದು ನಕ್ಕಳು!

---

## ಎರಡನೆಯ ಸಂಬಂಧವಲ್ಲ:
## ಹೆಂಡತಿ ಬೇರೆ.

“ಭಲ್ಲು, ನೀನು ಚಂದೂನೆದುರಿಗೆ ನಿಲ್ಲಬೇಡ ಹೋಗು; ನಾನೇ ‘ಝಾಜಾ’ ಆಗಿ ಅವನನ್ನು ಆಡಿಸತೇನೆ. ನಿನ್ನ ಮೇಲೆ ಯಾಕೋ ಇಂದು ಅವನಿಗೆ ಸಿಟ್ಟು!”

ಭಲ್ಲು ಹೋದ. **ಸಾವೇರಿಬಾಯಿ ಚಂದು**ವಿನ ಕೈಹಿಡಿದು, ಅವನನ್ನು ನಡೆಯಿಸುತ್ತ ದಿವಾನಖಾನೆಯಲ್ಲಿ ಬಂದರು. ಚಂದು ‘ಕೀಇಇಇ’ ಎಂದು ಕಿರುದನಿಯಲ್ಲಿ ಕೇಕೆಹಾಕುತ್ತಿದ್ದ. **ಪ್ರೊ. ದೇವದತ್ತರು** ತಮ್ಮ ಅಭ್ಯಾಸದ ಕೋಣೆಯಲ್ಲಿ ‘Russian Dramatists’ ಎಂಬ— ಅದೇ ಹೊಸತಾಗಿ ಪ್ರಸಿದ್ಧವಾದ— ಒಂದು ಇಂಗ್ಲೀಷ್ ಪುಸ್ತಕವನ್ನೋದುತ್ತ ಕುಳಿತಿದ್ದರು. ಚಂದು ಕೇಕೆಹಾಕುವಾಗಲೆಲ್ಲ ದೇವದತ್ತರು ಓದನ್ನು ನಿಲ್ಲಿಸಿ, ಮುಖ ಮೇಲಕ್ಕೆತ್ತಿ, ಕನ್ನಡಕ ಇಳಿಸಿ, ತುಟಿಯಲ್ಲಿಯೆ ನಗುವರು.

‘ನಾವು ಕುದುರೆಯಾಟ ಆಡಿದರೆ ನಿಮಗೇನು ತೊಂದರೆ ಆಗುವುದಿಲ್ಲವಲ್ಲ ?” ಸಾವೇರಿಬಾಯಿ ಕೂಗಿ ಗಂಡನನ್ನು ಕೇಳಿದರು

“ಇಲ್ಲ ಇಲ್ಲ; ನಡೆಯಲಿ! ನಾನೂ ಇದೀಗ ಬರತೇನೆ!” ದೇವದತ್ತರು ಕುಳಿತಲ್ಲಿಂದಲೆ ಕತ್ತು ಅಲ್ಲಾಡಿಸಿ ನುಡಿದರು.

ಸಾವೇರಿಬಾಯಿ ‘ಝಾಜಾ’ ಆದರು; ಚಂದು ಸವಾರನಾದ. ಆಟ ನಡೆಯಿತು. ದೇವದತ್ತರು ಓದುವುದರಲ್ಲಿ ಲಕ್ಷ್ಯವನ್ನು ತೊಡಗಿಸಿದ್ದರು.

ಒಂದು ಟಾಂಗಾ ಬಂದು ಪೋರ್ಚ್‌ನಲ್ಲಿ ನಿಂತಿತು. ಬೂಟಿಗೆ ಮಿಂಚು ಹಾಕುತ್ತ ಕುಳಿತಿದ್ದ ಭಲ್ಲು ಎದ್ದು, ಬಂದ ಗೃಹಸ್ಥನಿಗೆ ‘ಸಲಾಮ್’ ಮಾಡಿದ.

“ಪ್ರೊಫೆಸರರನ್ನು ಕಾಣಬೇಕು; ಕಾನಪುರದಿಂದ **ಧೀರೇಂದ್ರ** ಬಂದಿದ್ದಾರೆಂದು ತಿಳಿಸು!”

“ಹೆಸರಿನ ಕಾರ್ಡು ಇದ್ದರೆ ಕೊಡ್ರಿ!”

“ಇಲ್ಲ, ಬಾಯಿಂದಲೇ ಹೇಳು, ಸಾಕು.”

ಭಲ್ಲು ಹೋಗಿ ಪ್ರೊಫೆಸರರಿಗೆ ತಿಳುಹಿದ. ಬಂದ ಗೃಹಸ್ಥ ಟಾಂಗಾ ದಿಂದ ಇಳಿದು. ಬಂಗಲೆಯ ಪಾಟಿಗೆಗಳನ್ನೇರಿ ಮೊಗ ಸಾಲೆಯಲ್ಲಿ ಕಾಲಿ ಡುವಷ್ಟರಲ್ಲಿ ದೇವದತ್ತರು ಅವಸರದ ಹೆಜ್ಜೆಯಿಕ್ಕುತ್ತ ಅಲ್ಲಿಗೆ ಬಂದೇ ಬಿಟ್ಟರು.

"ಹ್ಯಾಲ್ಲೊ! ಏನಯ್ಯಾ ಇದು! ಕನಸು-ಮನಸಿನಲ್ಲಿಲ್ಲದೆ ಒಮ್ಮೆಲೆ ಅಪರೂಪವಾಗಿ ಬಂದುಬಿಟ್ಟೆ?" ಎನ್ನುತ್ತ ದೇವದತ್ತರು ಅವನ ಬಲಗೈ ಯನ್ನು ಕುಲುಕಿ, ಅದನ್ನು ತಮ್ಮ ಕೈಯಲ್ಲಿ ಹಾಗೆಯೆ ಹಿಡಿದು, ಎಡಗೈ ಯನ್ನು ಅವನ ಬೆನ್ನಮೇಲಿರಿಸಿ, ಜೊತೆಯಲ್ಲಿಯೆ ಕರೆದುಕೊಂಡು ತಮ್ಮ ಕೋಣೇಯಲ್ಲಿ ಬಂದರು.

"ಅಲ್ಲಾ, ಎಷ್ಟು ವರ್ಷಗಳ ಮೇಲೆ ಈ ನಿನ್ನ ಭೆಟ್ಟಿ? ಈ ಜನ್ಮದಲ್ಲಿ ನಿನ್ನನ್ನೇನು ನಾನು ಕಾಣುವುದಿಲ್ಲ— ಎಂದು ಕೊಂಡಿದ್ದೆ. ಅದಿರಲಿ, ಉಳಿದ ಸಮಾಚಾರ ಆಮೇಲೆ ಕೇಳ್ತೇನೆ. ನೀನು ಇಳಿದದ್ದು ಎಲ್ಲಿ? ಬಂದದ್ದು ಯಾವಾಗ?"

"ನಿನ್ನೆ ರಾತ್ರಿ ಬಂದೆ. ಈ ಊರಲ್ಲಿ ಒಬ್ಬ ಅಕ್ಕ ಇದ್ದಾರೆ; ಅವರ ಮನೆಯಲ್ಲಿಯೆ ಇಳಿದು, ಕೊಂಡಿದ್ದೇನೆ. ನೀನು ಇಲ್ಲಿಯ ಪ್ರೊಫೆಸರನಾ ಗಿದ್ದೀಯೆಂದು ತಿಳಿಯಿತು— ಈ ಮಾತು ಕಿವಿಗೆ ಬೀಳುವುದೇ ತಡ; ಓಡಿಬಂದೆ ....ನಿನ್ನ ಕಾಣೋಣ ಅಂತ!"

"ಈಗ ಹದಿನೈದು ವರ್ಷಗಳಾದರೂ ಆಗಿರಬೇಕು ನಾವು ಒಬ್ಬರ ನ್ನೊಬ್ಬರು ಕಾಣದೆ. Tanning Industry ಯಲ್ಲಿ ಏನಾದರೊಂದು ಮಾಡಬೇಕೆಂದು 'ಸ್ಕಾಲರ್‌ಶಿಪ್' ದೊರಕಿಸಿ ನೀನು ಕಾನಪುರಕ್ಕೆ ಹೋದ; ಅಲ್ಲೇ ಕೆಲಸಕ್ಕೂ ಸೇರಿಕೊಂಡು ಬಿಟ್ಟೆ. ಕಲಿತು ಬಂದು ಇಲ್ಲಿ ಕಾರಖಾನೆ ತೆಗೆದಿದ್ದರೆ, ದೇಶದಲ್ಲಿ ಹೊಸ ಉದ್ಯೋಗವನ್ನು ಪ್ರಾರಂಭಿಸಿದ ಶ್ರೇಯಸ್ಸಿನ ಜೊತೆಗೆ— ಹಲವು ಜನರಿಗೆ ಅನ್ನಕ್ಕೆ ಮಾರ್ಗ ಮಾಡಿಕೊಟ್ಟ ಪುಣ್ಯವೂ ನಿನಗೆ ಬರಬಹುದಾಗಿತ್ತು. ನಿನ್ನ ಸ್ವಂತದ ಹಿತವನ್ನಷ್ಟೇ ನೀನು ನೋಡಿಕೊಂಡೆ! ಈಗ ನಿನಗೆ ದೊಡ್ಡ ಸಂಬಳವಿರಬೇಕು ಮನುವೆ

ಗಿದುವೆ ಮಾಡಿಕೊಂಡಿದ್ದಿಯೋ ಏನು ಬಾಲಬ್ರಹ್ಮಚಾರಿಯಾಗಿ ಹಾಗೆಯೆ ಇದ್ದೀಯೊ? ಯಾಕೆಂದರೆ ಕಲಿಯುವಾಗ ನಿನ್ನ Ideals ನಲ್ಲಿ ಇದೂ ಒಂದಾಗಿತ್ತು. ಅದಕ್ಕೇ ಕೇಳತಾ ಇದ್ದೇನೆ!"

"ಅದೇ Ideals ಇದುವರೆಗೆ ಉಳಿದಿದ್ದರೆ ಜನರಿಗೊಂದು Idol ಆಗಿ ಮೆರೆಯುತ್ತಿದ್ದೆ. ನನ್ನದೊ— ಒಂದು ಸಾಮಾನ್ಯವಾದ ಬಾಳು! ಕಲಿತೆ, ಅಲ್ಲಿಯ ಕಾರಖಾನೆಯಲ್ಲಿ ಕೆಲಸ ದೊರೆಕಿಸಿದೆ, ಕಾಯಸ್ಥ ಕನ್ಯೆಯೊಬ್ಬಳನ್ನು ಮದುವೆಯಾದೆ, ಕೈಕಾಲು ಮುರಕೊಂಡು ಬಿದ್ದಹಾಗೆ ಕಾನಪುರದಲ್ಲಿಯೇ ಕುಳಿತು ಬಿಟ್ಟಿದ್ದೇನೆ. ಇಲ್ಲಿಗೆ ಬರಬೇಕೆಂದರೆ ಅಂತಹ ಕಾರಖಾನೆಗಳಿಲ್ಲ; ಹೊಸತಾಗಿ ತೆಗೆಯುವುದೆಂದರೆ ನಮ್ಮಂತಹರಿಂದ ಸಾಧ್ಯವಿಲ್ಲ."

"ಅದು ಹೋಗಲಿ! ಮದುವೆ ಆದದ್ದನ್ನು ಹೇಳಿದೆ, ಅದರ ಫಲಿತಾಂಶ ಹೇಳಲಿಲ್ಲ?"

"ಭೂಮಿ ಹುಲುಸಾದದ್ದು, ಎಂತಲೇ ನಾನೀಗ ನಾಲ್ಕು ಮಕ್ಕಳ ತಂದೆ!"

"ಶಹಾಬಾಶ್!"

ಅಷ್ಟರಲ್ಲಿ ಸಾವೇರಿಬಾಯಿ ಕೂಗಿ ಗಂಡನಿಗೆ ಹೇಳಿದರು: "ನೋಡಿದಿರಾ ಇವನ ತುಂಟಾಟ! ತಾನೇ ಹತ್ತಿ ಕೂಡಬೇಕಂತೆ; ನಾನು ಕೈ ಹಚ್ಚಬಾರದಂತೆ! ಜೋಲಿಹೋಗಿ ಬಿದ್ದರೆ ತಲೆ ಒಡೆಯುತ್ತದೆ! ಅಲ್ಲದೆ ನಾನೊಬ್ಬಳೇ ಎಷ್ಟುಸಲ ಕುದುರೆ ಆಗಬೇಕು; ನೀವೂ ಬನ್ರಿ!"

ದೇವದತ್ತರು ಕಿಟಕಿಯಲ್ಲಿ ಮುಖ ಚಾಚಿ ನಗುತ್ತ ಹೇಳಿದರು; "ಒಬ್ಬರ ಜೊತೆಯಲ್ಲಿ ಮಾತನಾಡತಾ ಇದ್ದೇನೆ. ನಡೆಯಲಿ, ನಡೆಯಲಿ; ನಿನಗೆ ಕುದುರೆ ಯಾಗಲಿಕ್ಕೆ ಬೆಸರವೆನಿಸಿದ್ದರೆ ಮತ್ತೇನಾದರೂ ಆಗು....ನಾನು ಬರುವವರೆಗು!"

ಮತ್ತೆ ಸ್ನೇಹಿತರಿಬ್ಬರ ಮಾತಿಗೆ ಪ್ರಾರಂಭವಾಯಿತು. ಬಂದವನು ನುಡಿದ: 'ನನ್ನ ವಿಷಯ ನೀನು ಕೇಳಿಕೊಂಡೆ; ನಿನ್ನ ಸಮಾಚಾರ ಏನೂ

ಹೇಳಲಿಲ್ಲ? ಅವರೇನೋ ನಿನ್ನ ಹೆಂಡತಿ ಸರಿ! ಮಕ್ಕಳೆಷ್ಟು ಜನ? ಅಲ್ಲಿ ಈಗ ಆಡುತ್ತಿರುವುದೊಂದು! ಆ ಮೇಲೆ?''

''ಆ ಮೇಲೆನು? ಮೇಲಿಲ್ಲ, ಕೆಳಗಿಲ್ಲ! ಅದೊಂದೇ!''

''ಅಂದರೆ? ಇವರೇನು ನಿನಗೆ ಎರಡನೆಯ ಸಂಬಂಧವೋ ಏನು? ಬಹಳ ಚಿಕ್ಕವರಾಗಿ ಕಾಣ್ತಾ ಇದ್ದಾರೆ!.... ಇದು ನೋಡು, ನನ್ನ ಮಾತು ಸ್ವಲ್ಪ ಸ್ಥೂಲ. ಹೀಗೆ ಕೇಳಿದ್ದಕ್ಕಾಗಿ ಇನ್ನೇನೂ ತಿಳಿದುಕೊಳ್ಳಬೇಡ ಮತ್ತೆ!''

''ಛೇಛೇ! ಇದರಲ್ಲಿ ಇನ್ನೇನು ತಿಳಿದುಕೊಳ್ಳುವುದಡೆಯೊ! ನೋಡು, ಸಂಬಂಧವೇನೂ ಎರಡನೆಯದಲ್ಲ; ಆದರೆ ಹೆಂಡತಿ ಬೇರೆ!''

''ಇದೇನೊಪ್ಪಾ, ನಿನ್ನ ಈ ಒಗಟದ ಮಾತು ನನಗೆ ಅರ್ಥವಾಗುವುದಿಲ್ಲ. ನಾನು ನಿನ್ನಂತೆ ಕವಿಯೂ ಇಲ್ಲ; ಮಾತುಗಾರನೂ ಅಲ್ಲ; ಚರ್ಮದ ಕಾರಖಾನೆಯೊಳಗಿನ ಕೂಲಿಕಾರ ನಾನು! ನೀನೋ— ಶಬ್ದ ಬ್ರಹ್ಮ! ನಿನ್ನ ಚಮತ್ಕಾರದ ಮಾತು ಬೇಡ. ಸಣ್ಣಮಕ್ಕಳಿಗೆ ಕಥೆ ಹೇಳಿದ ಹಾಗೆ ಸರಳವಾಗಿ ಹೇಳು!''

''ನಿಜವಾಗಿ ನೋಡು, ಅದೊಂದು ಕಥೆಯೇ ಆಗುವಹಾಗೆ ಅದೆ ... ಬರೆದರೆ!''

''ಬರೆಯುವಂತೆ ಆಮೇಲೆ! ಈಗ ಹಾಗೆಯೆ ಹೇಳು, ಕೇಳೋಣ!''

''ನಿಧಾನವಾಗಿ ಕುಳಿತಾಗ ಹೇಳುವ ಕಥೆಯದು! ನೀನು ಬಿಸಿಲಲ್ಲಿ ಬಂದಿದ್ದಿಯಾ! ಏನಾದರೂ cold drink ತರಿಸುತ್ತೇನೆ, ಮೊದಲು!'' ಎರಡು ಗ್ಲಾಸು cold drink ತರಲು ಭಲ್ಲೂಗೆ ಅಪ್ಪಣೆ ಆಯಿತು.

''ಡ್ರಿಂಕ್ಸ್ ಬರಲಿ; ಆದರೆ ನಿನ್ನ ಕಥೆ ಕೇಳುವುದಕ್ಕೆ ಅದರದೇನು ತಡೆ? ನಿನಗೀಗ ಬೇರೆ engagement ಏನೂ ಇಲ್ಲವಲ್ಲ? ನಮ್ಮ ಹಾಗೇನು ಒಂದೇ ಕೆಲಸವಲ್ಲ ನಿನಗೆ; ಸಾವಿರ ಉಪಾಧಿಗಳು!''

"ಈಗ ಯಾವುದನ್ನೂ ಇಟ್ಟುಕೊಂಡಿಲ್ಲ; ಎಲ್ಲಾ ಕಡಿಮೆ ಮಾಡಿಕೊಂಡು ಬಿಟ್ಟಿದ್ದೇನೆ. ಇಷ್ಟಾಗಿ ಅವೆಲ್ಲ ನೀನು ಬಂದಾಗಲೇ? ನಿಜವಾಗಿ ನೀನು ಬಂದದ್ದರಿಂದ ನನಗೆ ಪರಮಾನಂದವಾಗಿದೆ; ಅವಳನ್ನು ಕರೆದು ನಿನ್ನ ಪರಿಚಯಮಾಡಿ ಕೊಡುತ್ತೇನೆ!"

"ಛೆ, ಈಗಲೇ ಬೇಡ! ಅವರ ವಿಷಯ ಕೇಳಿದ ಮೇಲೆ ಆಗಲಿ! ಪಾಪ, ತಾಯಿ-ಮಗು ಎಷ್ಟೊಂದು ಸಂತೋಷದಲ್ಲಿ ಆಡುತ್ತಿದ್ದಾರೆ, ಅವರಿಗೆ ಈಗ disturb ಮಾಡುವವುದು ಬೇಡ!"

ಭಲ್ಲು drinks ತಂದು ಇಬ್ಬರಿಗೂ ಕೊಟ್ಟ. ಅದನ್ನು ಸವಿಯುತ್ತ ಬಂಪವನು ನುಡಿದ:— 'ಹಂ, ಇನ್ನು ಪ್ರಾರಂಭವಾಗಲಿ ನಿನ್ನ ಕಥೆ! Adventure, Romance, Mystery ಎಲ್ಲ ಇರಬಹುದು ಅದರಲ್ಲಿ!'

"ಅದನ್ನು ನೀನೇ ಕಂಡುಕೊ; ಅಂತು ನೀನೇನು ನನ್ನನ್ನು ಬಿಡುವಹಾಗಿಲ್ಲ! ಅವಳದೆಂದರೂ ನನ್ನದೇ ಕಥೆಯದು. ಅದನ್ನು ನಿನ್ನೆದುರಿನಲ್ಲಿ ಹೇಳುವುದು ಎಂದರೆ ನನಗೂ ಆನಂದ! ಆಗಲಿ, ನಾನೇನೋ ಇದ್ದುದಿದ್ದಹಾಗೆ ಸರಳವಾಗಿ ಹೇಳಿಬಿಡ್ತೇನೆ!" ಎಂದು ದೇವದತ್ತರು ಹೇಳತೊಡಗಿದರು.

"ಅದು ಹೀಗಾಯಿತು: ನಾನು ಕೇಂಬ್ರಿಜ್‌ನಲ್ಲಿ ಕಲಿಯುತ್ತಿರುವಾಗ ಈಕೆ ತಂದೆಯ ಜೊತೆಗೆ ಸೀಮೆ ನೋಡುವುದಕ್ಕಾಗಿ ಬಂದಿದ್ದಳು. ನಾನು ನಮ್ಮ ಕಾಲೇಜಿನ ಬಿಡುವಿನ ಅವಧಿಯಲ್ಲಿ, ಲಂಡನ್ನಿನ ಒಂದು ಹೋಟೆಲಿನಲ್ಲಿ ಇರುತ್ತಿದ್ದೆ. ಇವರೂ ಅಲ್ಲಿ ಬಂದು ಇಳಿದರು. ಹೋಟೆಲ್ಲಿನ ಬಿಲ್ಲು ಕೊಡುವಾಗ ಇವಳ ತಂದೆ ಮ್ಯಾನೆಜರೊಡನೆ ತಂಟೆಮಾಡಿದ. ಇವರ ತಂದೆ ವಿದ್ಯಾಖಾತೆಯ ಮುಖ್ಯಾಧಿಕಾರಿಯಾಗಿ ನಿವೃತ್ತನಾಗಿದ್ದ. ಹಾಗ ನೋಡಿದರೆ ತುಂಬ ಒಳ್ಳೆಯ ಮನುಷ್ಯ. ಆದರೆ ಸುಲಭವಾಗಿ ರೊಕ್ಕ ಬಿಚ್ಚುವವನಲ್ಲ; ಕೈ ಸ್ವಲ್ಪ ಬಿಗುಹಿನದು! ಲಂಡನಿನಲ್ಲಿ ಪ್ರತಿಯೊಂದಕ್ಕೂ ಪ್ರವಾಸಿಕರಿಂದ ಅನ್ಯಾಯವಾಗಿ ಹೆಚ್ಚು ರೊಕ್ಕ ಸೆಳೆಯುತ್ತಾರೆ— ಎಂದು ಆತನ ಗ್ರಹಿಕೆಯಾಗಿತ್ತು. ಅವರ ತಂಟೆಯಲ್ಲಿ ಪಂಚಾಯತಿಮಾಡಿ ನಾನು ತೀರ್ಪುಕೊಟ್ಟೆ. ನಮ್ಮ ಪರಿಚಯಕ್ಕೆ ಅದೇ ಕಾರಣ. ಮುಂದೆ ಎರಡು ತಿಂಗಳು ನಾನು ಅವರೊಡನೆ ಸೀಮೆಯನ್ನೆಲ್ಲ ಸುತ್ತುಹಾಕಿದೆ. 'ಗೈಡ್'

ಎಂದು ನನ್ನನ್ನು ಕರೆದೊಯ್ದರೆ ಕಡಿಮೆ ವೆಚ್ಚ, ಬಂದು ಪ್ರವಾಸ ಸುಸೂತ್ರವಾಗಿ ಜರುಗಬಹುದೆಂದು ಮುದುಕನ ಲೆಕ್ಕ; ಒಳ್ಳೆ ಹುಡುಗಿಯೊಡನೆ, ಒಂದು ಕಾಸೂ ಕೈಯಿಂದ ಬೀಳದೆ, ದೇಶಸುತ್ತಾಡಲಿಕ್ಕೆ ಸಿಕ್ಕರೆ ಯಾಕೆ ಬಿಡಬೇಕು?....ಎಂದು ನನ್ನ ಲೆಕ್ಕ; ನನ್ನಂತಹ ಒಬ್ಬ 'ನವಜವಾನ್' ಯಾವಾಗಲೂ ಜೊತೆಗಿದ್ದರೆ ಸೀಮೆಗೆ ಬಂದದ್ದಕ್ಕೂ ಸಾರ್ಥಕ ...ಎಂದು ಮಗಳ ಲೆಕ್ಕ. ನಮ್ಮ ಮೂವರ ಲೆಕ್ಕ ಮೇಳಗೂಡಿ ನಮ್ಮ ಪ್ರವಾಸದ ಉತ್ಸಾಹ ಮುಪ್ಪುರಿಗೊಂಡು ಸಾಗಿತು. ಈ ಅವಧಿಯಲ್ಲಿಯೇ ನಮ್ಮ ಪರಿಚಯದ ಬೀಜಕ್ಕೆ ಪ್ರೇಮದ ಮೊಳಕೆಯೊಡೆಯಿತು. ನಾವಿಬ್ಬರು 'ಥೇಮ್ಸ್' ನದಿಯನ್ನು ಸಾಕ್ಷಿಯಿಟ್ಟು ವಚನಬದ್ಧರಾದೆವು. ಅವಳು ಮರಳಿ ದೇಶಕ್ಕೆ ಬಂದು ಕಾಲೇಜ ಸೇರಿದಳು. ನಾನು ಆಮೇಲೆ ಸುಮಾರು ನಾಲ್ಕು ವರ್ಷಗಳ ವರೆಗೆ ಸೀಮೆಯಲ್ಲಿದ್ದೆ. ನಾನು ಅಲ್ಲಿ **ಎಮ್. ಎ.** ಆದ ವರ್ಷವೇ ಅವಳು ಇಲ್ಲಿ **ಎಮ್. ಎ.** ಆದಳು.

ಇಂಗ್ಲೀಷ್ ಪ್ರೊಫೆಸರನ ಕೆಲಸ ನನಗಾಗಿ ಕಾದಿತ್ತೇನೊ ಎನ್ನುವಹಾಗೆ, ಸೀಮೆಯಿಂದ ಬಂದ ಕೂಡಲೆ ನನಗೆ ಕೆಲಸ ದೊರೆಯಿತು. ಕೆಲಸ ದೊರೆತ ಒಂದು ವಾರದಲ್ಲಿ ಮದುವೆಯ ಸಂಭ್ರಮವೂ ಮುಗಿದು ಹೋಯಿತು ..

"ಇಲ್ಲಿಗೆ Romantic Period ಮುಗಿಯಿತೇನೋ!....ಹೌದಯ್ಯ, ಇದರಲ್ಲಿ Mystery ಏನೂ ಬರಲಿಲ್ಲವಲ್ಲ?" ಬಂದವನು ಕೇಳಿದ.

"ಅದು ಇನ್ನೂ ಮುಂದೆ, ಕೇಳು!

....ಸಾವೇರಿ -- ಇದು ನಿನ್ನತ್ತಿಗೆಯ ಹೆಸರು -- ನಾನು ಬರುವ ಮೊದಲೇ ಒಂದು ಹೈಸ್ಕೂಲಲ್ಲಿ ಶಿಕ್ಷಿಕೆಯಾಗಿ ಸೇರಿದ್ದಳು. ಅಷ್ಟುಹೊತ್ತಿಗೆ ಅವಳ ತಂದೆ ತೀರಿಕೊಂಡಿದ್ದ. ತನ್ನ ಆಸ್ತಿಯನ್ನೆಲ್ಲ ಒಬ್ಬ ದತ್ತುಮಗನಿಗೆ ಮಾಡಿ, ಇವಳ ಹೆಸರಿನಲ್ಲಿ ಸ್ವಲ್ಪ ಹಣವನ್ನು ಮಾತ್ರ ಬ್ಯಾಂಕಿನಲ್ಲಿರಿಸಿದ್ದ. ನನಗೇನು ಅವಳ ಆಸ್ತಿಯ ಮೇಲೆ ಆಶೆಯಿರಲಿಲ್ಲ; ಎಂತಲೇ ಅದು ದತ್ತು ಮಗನಿಗೆ ಹೋದದ್ದಕ್ಕಾಗಿ ದುಃಖವೂ ಎನಿಸಲಿಲ್ಲ. ಆದರೆ ದೊಡ್ಡ ಕಾಲೇಜಿನ ಇಂಗ್ಲೀಷ್ ಪ್ರೊಫೆಸರನ ಹೆಂಡತಿಯೆನಿಸಿಕೊಳ್ಳುವವಳು ಶಿಕ್ಷಿಕೆಯಾಗಿ

ದುಡಿಯುವುದು ನನಗೆ ಸರಿಬರಲಿಲ್ಲ. ಗಂಡುಸಿಗೆ 'ಪ್ರಪಂಚದಲ್ಲಿಯ ಪೌರುಷ ಎನ್ನುವುದೆಲ್ಲ ತನಗೇ ಸೇರಿದ್ದು, ಹೆಂಗುಸಿನ ರಾಜ್ಯ ಮನೆಯ ಒಳಚಕ್ಕುಬಂದಿಯಲ್ಲಿ' ಎನಿಸುವುದು ಪರಂಪರಾಗತ. ನಾನು ಐದುನೂರು ರೂಪಾಯಿ ಸಂಬಳ ತರುವಾಗ ಹೆಂಡತಿ ದುಡಿಯುವ ಅಗತ್ಯವೇನು? 'ಗೃಹಿಣಿ' ಅವಳು, ಮನೆ ನೋಡಿಕೊಳ್ಳುವುದೇ ಅವಳ ಕೆಲಸ! ಈ ಮಾತನ್ನು ನಾನು ಹೇಳಿದಾಗ ಸಾವೇರಿಗೆ ಒಪ್ಪಿಗೆಯಾಗಲಿಲ್ಲ; ಆದರೂ ನನ್ನ ಮಾತಿಗೆ ಎದುರುಬೀಳದೆ, ಕೆಲಸಬಿಟ್ಟು ಆಕೆ ಮನೆ ನೋಡಿಕೊಳ್ಳತೊಡಗಿದಳು. ಅಂತೂ ಮನೆ ಎನ್ನುವುದೊಂದು ಏರ್ಪಾಡಾಗಿ, ನಮ್ಮ ಸಂಸಾರದ ಶಕಟ ವನ್ನು 'ಹಲಾ' ಎಂದು ಹಾದಿಯಮೇಲೊಮ್ಮೆ ನೂಕಿದೆವು....

....ನನಗೆ ಮೊದಲಿನಿಂದಲೂ ಸಾಹಿತ್ಯದ ಮೇಲೆ ಪ್ರೀತಿ, ಬರೆಯು ವುದರ ಕಡೆಗೆ ಒಲವು; ಇದನ್ನು ನೀನೂ ಬಲ್ಲೆ! ಕಾಲೇಜಿನ ವಾತಾವರಣವು ಇದಕ್ಕೆ ಹೆಚ್ಚಿನ ಸೌಕರ್ಯವನ್ನು ಒದವಿಸಿಕೊಟ್ಟಿತು. ನನ್ನ ಬರವಣಿಗೆ ಬೆಳೆದಹಾಗೆ ಸ್ನೇಹಿತರೂ ಬೆಳೆದರು, ಪರಿಚಯವೂ ಹೆಚ್ಚಾಯಿತು. 'ಹಳ್ಳಿ ಯಲ್ಲಿ ಹನುಮಪ್ಪನೆ ದೊಡ್ಡ ದೇವರು' ಎನ್ನುವಹಾಗೆ ಒಳ್ಳೆಯವರು ಇಲ್ಲ ದಿರುವಾಗ ಇದ್ದವರಿಗೇ ಮರ್ಯಾದೆ ಹೆಚ್ಚು. ಅದರಲ್ಲಿ ಮೂರು ನಾಲ್ಕು ಗುಣಗಳು ಒಬ್ಬನಲ್ಲಿಯೆ ಅಡಕವಾಗಿದ್ದರೆ ಮುಗಿದೆಹೋಯಿತು. ಮೊದಲನೆ ಯದು—ನಾನು ಇಂಗ್ಲೀಷ್ ಪ್ರೊಫೆಸರು ಎಂದು ಗೌರವ; ಎರಡನೆಯದು ಕವಿ; ಮೂರನೆಯದು—ಕತೆಗಾರ; ನಾಲ್ಕನೆಯದು—ಒಳ್ಳೆ ಮಾತುಗಾರ! ಜನಗಳ ಮೆಚ್ಚುಗೆಗೆ ಇದಕ್ಕೂ ಹೆಚ್ಚೇನು ಬೇಕು? ರಾಜಕೀಯ ರಂಗ ವೊಂದನ್ನು ಬಿಟ್ಟು, ಯಮನೂರು ಜಾತ್ರೆ ಮೊದಲುಮಾಡಿ 'ಯುನಿವರ್ಸಿಟಿ ಯಾಕೆ ಬೇಕು ?' ಎಂಬ ಚರ್ಚಾಸಭೆಯವರೆಗಿನ ಎಲ್ಲಕಡೆಗಳಲ್ಲಿಯೂ ನನ್ನನ್ನೆತ್ತಿ ಕುಣಿಸಾಡುವವರೆ! ಕಾಲೇಜಿನ ಕೆಲಸ, ಅಲ್ಲಿಯ ವಿಷಯಗಳ ಸಿದ್ಧತೆ, ನನ್ನ ಸ್ವಂತದ ಅಭ್ಯಾಸ, ಗ್ರಂಥವಿಮರ್ಶೆ, ಕಾವ್ಯರಚನೆ, ಕಥಾ ನಿರ್ಮಿತಿ, 'ಮುನ್ನುಡಿ' ಬರೆಯುವುದು, ಸಾಹಿತ್ಯಸಲಹೆ, ಸಭೆಗಳಲ್ಲಿಯ ಭಾಷಣ; ಇವುಗಳಲ್ಲದೆ ಅನೇಕ ಸಂಘಗಳ ನಾಯಕತ್ವ, ಸಂಸ್ಥೆಗಳ ಚಾಲ ಕತ್ವ—ಈ ವಿವಿಧ ವ್ಯಾಪ್ಯಾರಗಳಲ್ಲಿ ಸಂಪೂರ್ಣವಾಗಿ ನಾನು ಬೆರೆತು ಕೊಂಡುಬಿಟ್ಟೆ. 'ಸಂಸಾರಸಾಗಿಸುವಾಕೆ ಸಾವೇರಿ; ಅದರ ಚಿಂತೆ ಅವ

ಳಿಗೆ. ಸಂಬಳ ತಂದು ಅವಳ ಸೆರಗಿನಲ್ಲಿ ಸುರಿದುಬಿಟ್ಟರೆ ನನ್ನ ಸಂಬಂಧ ಮುಗಿಯಿತು. ಕೆಲಸಬೊಗಸೆಗೆ ಆಳಿವೆ; ಕೈಯಲ್ಲಿ ಕಾರೂ ಇದೆ. ಮನೆ ನೋಡಿಕೊಂಡು ಉಳಿದ ಹೊತ್ತಿನಲ್ಲಿ ಕಸೂತಿಯೊ, ಕ್ಲಬ್ಬೊ, ಸಿನೇಮಾಸೊ ಮಾಡಿಕೊಂಡು ಅವಳು ಇದ್ದು ಬಿಟ್ಟರೆ, ಸಾವೇರಿಗೆ ಸಾಕಷ್ಟು ಸುಖ ಕೊಟ್ಟ ಹಾಗಾಯ್ತು! ನಾನು ಅವಳೊಡನೆ ನಗೆಯಾಡುವುದು---ಕೆಲೆದಾಡುವುದೊ ಚೊ-- ಅದೇನು ತಿಂಡಿತಿನ್ನುವಾಗ, ಊಟಮಾಡುವಾಗ ಸಾಕು! ಇದಕ್ಕೂ ಹೆಚ್ಚೇನು ಬೇಕು?' ಎಂಬ ಮನೋವೃತ್ತಿಯಲ್ಲಿ, ಹೆಂಡತಿಯೊಡನೆ ಸರಸಕ್ಕೆ ನನ್ನ ದಿನಚರಿಯಲ್ಲಿ ಸ್ವತಂತ್ರಸ್ಥಾನವನ್ನು ನಾನು ಕೊಟ್ಟಿರಲಿಲ್ಲ, ಅಥವಾ ಕೊಡಲು ಸಾಧ್ಯವಾಗಿರಲಿಲ್ಲವೇನೊ! ವಿಲಾಸಕ್ಕಾಗಿ ಮಾಡಿದ್ದು ವ್ಯಸನ ವಾಗಿ ಅಂಟಿಕೊಳ್ಳುವಹಾಗೆ ನನ್ನ ಜೀವನವೆಲ್ಲ ವಾಙ್ಮಯವಾಯಿತು. ನಾನು ಮಾತನ್ನೇ ಉಸುರಾಡಿಸಹತ್ತಿದೆ! ನಾನು ಹೀಗೆ 'ಪಬ್ಲಿಕ್ ಮ್ಯಾನ್' ಆದೆ; ಆದರೆ ಮನುಷ್ಯ ಪೂರ್ಣ 'ಪಬ್ಲಿಕ್‌ಮ್ಯಾನ್' ಆಗುವುದು ಎಂದರೆ ಹೆಂಡತಿಗೆ ಪರಪುರುಷನಾದ ಹಾಗೆಯೇ ಎಂಬುದು ನನ್ನ ಅನುಭವ! ಹೀಗೆ ನನ್ನ ವೈ. ನನ್ನ ಮನಸ್ಸು ಪರರ ಪಾಲಾದುವು; ನಾನೂ ಸಾವೇರಿಯೂ ಒಳಗೊಳಗೇ ಪಾಲಾದೆವು ..

..ಸಾವೇರಿಯೆಂದರೆ ಸಲುಗೆಯಲ್ಲಿ ಬೆಳೆದವಳು. ನನ್ನಷ್ಟೇ ಕಲಿ ತವಳು. ರೂಪದಲ್ಲಿ ಚೆಲುವೆ. ಹರಟೆಯಲ್ಲಿ ಚತುರೆ; ಆದರೆ ಅವಳೊಂದು ಸ್ವಾಭಿಮಾನದ ಸ್ವಯಂಭುಮೂರ್ತಿ! ನನ್ನಂತೆ ತಾನೂ ಹೆಸರಾಗುವ ಹಾಗೆ, ಮನ್ನಣೆ ದೊರೆಯುವ ಹಾಗೆ ಏನಾದರೂ ಮಾಡಬೇಕು—ತನ್ನನ್ನು ಜನರು ಹೊಗಳಬೇಕು—ತಾನು ಅವರನ್ನು ತನ್ನ ಸುತ್ತು ಕುಣಿಸಬೇಕು- ಇಂಥವರ ಹೆಂಡತಿ ಎಂದು ತನಗೆ ಮನ್ನಣೆ ದೊರೆಯದೆ, ತನ್ನ ವ್ಯಕ್ತಿತ್ವ-- ದಿಂದಲೇ ಅದು ತನಗೆ ದೊರೆಯಬೇಕು—ಇಂತಹ ಹಲಕೆಲವು ಆಶೆ-- ಆಕಾಂಕ್ಷೆಗಳು ಅವಳ ಮನಸ್ಸನ್ನು ಬಹಳವಾಗಿ ಕಲಕಿದುವು. ಕೆಲಸ ಬಿಡಿ ಸಿದೆನೆಂದು ಮನಸ್ಸಿಗೆ ತುಸು ಹಚ್ಚಿ ಕೊಂಡಿದ್ದಳು; ಆಮೇಲೆ ಅವಳ ವಿಷ ಯದಲ್ಲಿ ನಾನು ತೋರಿಸಿದ ಉಪೇಕ್ಷೆ ಅವಳನ್ನು ಹೆಚ್ಚಾಗಿ ನೋಯಿಸಿ ದ್ದಿತು.ನಾನು ಕೆಲಸಕ್ಕೆ ಅಥವಾ ಹೊರಗೆ ಹೋದಾಗಲಂತೂ ಸರಿಯೆ, ಮನೆಯಲ್ಲಿರುವಾಗಲೂ ಅವಳೊಡನೆ ಮಾತು-ಕಥೆಗೆ ನನಗೆ ಅವಕಾಶವೇ

ದೊರೆಯುತ್ತಿರಲಿಲ್ಲ. ಅಡಿಗೆ ಏನು ಮಾಡಿಸಲಿ ? ಫಲಾಹಾರಕ್ಕೆ ಯಾವ ಪದಾರ್ಥ ಬೇಕು?--ಬ್ಲಾವುಜಿಗೆ ಈ ಅರಿವೆ ಸರಿಹೋಗುವುದೊ ?—ಗಡಿಯಾರ ಕಟ್ಟಿದ ಕೈಯಲ್ಲಿ ಬಳೆ ಇಡದಿದ್ದರೆ ಹ್ಯಾಗೆ ಕಾಣುವುದು ?--ಈ ಗುಬ್ಬಿಯ ಚುಂಚಿಗೆ ಯಾವ ಬಣ್ಣದ ದಾರ ಸರಿಹೋಗುವುದು ?- ಇಂತಹ ಅವಳ ಸಾವಿರದಾಒಂದು ಪ್ರಶ್ನೆಗಳಿಗೆಲ್ಲ ಉತ್ತರ ಕೊಡುತ್ತಾ ಕೂಡುವುದು ಎಂದರೆ, ಹೊತ್ತಿನ ಅಪವ್ಯಯ ಎನಿಸುವುದು ನನಗೆ. ಸಾಹಿತ್ಯಚರ್ಚೆಯಿದ್ದರೆ ಬೇಕಾದಷ್ಟು ಹೊತ್ತು ಮಾತನಾಡಬಹುದು; ಆದರೆ ಅವಳಿಗೆ ಅದರಲ್ಲಿ ಅಭಿರುಚಿ ಇರಲಿಲ್ಲ. ಪಾಪ, ಅವಳು ಕ್ಲಾಸಿಗೆ ಹಚ್ಚಿದ ಪುಸ್ತಕಗಳ ಹೊರತು ಬೇರೆ ಏನನೂ ಓದಿರಲೇ ಇಲ್ಲ ! ”

“ ನೀನು ಹೀಗೆಲ್ಲಾ ಹೇಳ್ತಾ ಇದ್ದೀಯೆ; ಅತ್ತಿಗೆಯವರು ಒಮ್ಮೆಲೆ ಒಳಗೆ ಬಂದುಬಿಟ್ಟರೆ? ” ಬಂದವನು ನಡುವೇ ಕೇಳಿದ

“ಆ ಹೆದರಿಕೆ ಬೇಡ; ಯಾರಾದರೂ ನನ್ನ ಜತೆಯಲ್ಲಿ ಕುಳಿತಿದ್ದಾಗ ಅವಳು ಹಾಗೆ ಬರುವುದಿಲ್ಲ. ಅದರಲ್ಲಿಯೂ ಈಗ ಆಟದ ಸಂಭ್ರಮದಲ್ಲಿಯೆ ಇದ್ದಾಳೆ!”

ಚಂದು ಕಿರುದನಿಯಲ್ಲಿ ಮತ್ತೊಂದು ಸಲ ಕೇಕೆಹಾಕಿದ; ಅವಳ್ಕೆ ಸಾವೇರಿಬಾಯಿ ದನಿಗೂಡಿಸಿದರು.

“ಹಂ, ಮುಂದೆಸಾಗಲಿ ಹಾಗಾದರೆ ನಿನ್ನ ಪುರಾಣ!” ಗೆಳೆಯ ನುಡಿದ.

“ಸರಿ, ನಾನಿಲ್ಲದಿರುವಾಗ, ಅರಿಯದವರೆದುರಿಗೆ ಅಥವಾ ಅನಭಿಜ್ಞರೆದುರಿಗೆ ಬೇಕಾದಷ್ಟು ಜಂಭ ಹೊಡೆಯುವಳು. ಅದರಲ್ಲಿಯೂ ಬರಬರುತ್ತ ಅವಳ ಸ್ವಾಭಿಮಾನ ಬಲು ಸೂಕ್ಷ್ಮಕ್ಕಿಳಿದಿತ್ತು. ಹೆಜ್ಜೆಹೆಜ್ಜೆಗೂ ಆ ತೂಕ ಹಿಡಿದು ನಡೆಯುವುದು ನನಗೂ ಆಗುತ್ತಿರಲಿಲ್ಲ. ಕೆಲವು ಸಲ ನಾನೂ ನಿರ್ದಾಕ್ಷಿಣ್ಯದಿಂದಲೇ ನಡೆಯುತ್ತಿದ್ದೆ. ಪ್ರಸಂಗ ಬಂದರೆ ಅವಳೊಡನೆ ವಾದ-ವಿವಾದಕ್ಕೆ ನಿಲ್ಲುತ್ತಿದ್ದೆ ತಲೆಯಲ್ಲಿ ತರ್ಕಶಾಸ್ತ್ರ; ಈ ಕೈಯಲ್ಲಿ ಮಾನಸಶಾಸ್ತ್ರ, ಇನ್ನೊಂದು ಕೈಯಲ್ಲಿ ಭಾಷಾಶಾಸ್ತ್ರ! ಇವುಗಳೊಂದಿಗೆ ಹೆಂಡತಿ ಆಡುವ ಪ್ರತಿ ಮಾತಿಗೂ ಅರ್ಥ ತೆಗೆಯಹತ್ತಿದರೆ

ಅಥವಾ ಅದನ್ನು ಈ ಮೂರರ ಒರೆಗೆ ಹಚ್ಚಲು ಪ್ರಯತ್ನಿಸಿದರೆ ಅವಳ ಗತಿಯೇನು? ಹೆಂಡತಿ ಬೇಡುವುದು ಪ್ರೇಮದ ಹುಚ್ಚಾಟವನ್ನು, ಹೊರತು ಶಾಸ್ತ್ರದ ಗೊಡ್ಡು ಹರಟೆಯನ್ನಲ್ಲ ಎಂಬುದು ಆಗ ನನಗೆ ತಿಳಿಯಲಿಲ್ಲ! ಕಲ್ಪನೆ, ತರ್ಕ, ವಿಚಾರ ಇವುಗಳಲ್ಲಿಯೆ ಹುಟ್ಟಿ ಬೆಳೆಯುವವರಿಗೆ ಇದು ಬೇಗನೆ ತಿಳಿಯುವುದು ಕಷ್ಟ. ನನ್ನ ಕೊಂಕುಮಾತುಗಳು ಅವಳ ಸ್ವಾಭಿ-ಮಾನವನ್ನು ಮೇಲೆ ಮೇಲೆ ಏರಿಸತೊಡಗಿದುವು. ಅವಳೂ ಹಟಕ್ಕೆ ಬಿದ್ದಳು ಹೀಗೆ ಈ 'ಶಬ್ದಬ್ರಹ್ಮನ ದೇಗುಲದಲ್ಲಿ ಬೇಗೂ ಬೆಳಗೂ ಚಿಳಿಭಿಟೆ ಬೆಂಕಿ' ಯ ಕಿಡಿಗಳು ಹಾರಹತ್ತಿದುವು....

....ನನ್ನಂತೆ ಹೆಸರಾಗಬೇಕೆಂದರೆ ನಾನು ಮಾಡಿದ ಹಾಗೆ ಮಾಡಬೇಕು. ಸಾಹಿತ್ಯದ ಹಾದಿ ಅಷ್ಟು ಸುಲಭವಲ್ಲ — ಎಂದು ತೋರಿತು. ಇಷ್ಟಾಗಿ 'ಗಂಡ ಮಾಡಿದ್ದನ್ನೇ ತಾನೇಕೆ ಮಾಡಬೇಕು, ಸಾಹಿತ್ಯದಲ್ಲಿ ಆತನು ಹೆಸರು ಗಳಿಸಿದ್ದರೆ ಬೇರೆ ಯಾವುದಾದರೊಂದು ಕಲೆಯಲ್ಲಿ ತಾನು ನೈಪುಣ್ಯವನ್ನು ಪಡೆಯಬಹುದು' ಎಂದು ಅವಳಿಗೆನಿಸಿತು. ಈ ವಿಚಾರ ತಲೆಯಲ್ಲಿ ಬರುವುದೊಂದೇ ತಡ; ಒಂದು ತಂಬೂರಿ, ಒಂದು ಸ್ವರದ ಪೆಟ್ಟಿಗೆ ಒಂದು ಜೊತೆ ತಬಲಾ ಮನೆಗೆ ಬಂದೇ ಬಿಟ್ಟುವು. ಮಾರನೆಯ ದಿನ ನಾನು ಕಾಲೇಜಿನಿಂದ ಬರುವುದರೊಳಗಾಗಿ ಸಂಗೀತಶಿಕ್ಷಕ ಸ್ವರ ಹೇಳುತ್ತಿದ್ದ. ಈಕೆ ತನ್ನ ಗಂಟಲೊಳಗಿಂದ ಅದನ್ನೇ ಬಯಲಿಗೆ ಹಾಕುತ್ತಿದ್ದಳು. ಏನನೇ ಕಲಿಯಲಿ, ಒಟ್ಟು ಕಲಿತರೆ ಸಾಕು! ಅದರಿಂದ ಅವಳಿಗೆ ಸಂತೋಷವಾಗುತ್ತಿದ್ದರೆ ನನಗೂ ಸಂತೋಷ!' ಎಂದು ಭಾವಿಸಿ ನಾನವಳ ಸಂಗೀತ ಪಾಠಕ್ಕೆ ಉತ್ತೇಜನವನ್ನೇ ಕೊಟ್ಟೆ. ಗ್ರಾಮೋಫೋನು, ರೇಡಿಯೋ ಈ ನಿರ್ಜೀವ ವಸ್ತುಗಳ ಹಾಡಂತೂ ನಡೆದೇ ಇತ್ತು. ಇದರ ಜೊತೆಗೆ ಸಂಗೀತ ಮಾಸ್ತರನ ಹಾಡು, ಅದನ್ನೇ ಅನುಕರಿಸುವ ಸಾವೇರಿಯ ಹಾಡು! ಮನೆಯು ನಾವು ನಿದ್ದೆಯಲ್ಲಿರುವಾಗಷ್ಟು ಶಾಂತವಿರುತ್ತಿತ್ತು. ಉಳಿದ ಹೊತ್ತಿನಲ್ಲೆಲ್ಲ ಒಂದಿಲ್ಲೊಂದರ ಹಾಡೇ ಹಾಡು! 'ಬೇಗು-ಬೆಳಗು ಇದೇ ಹಾಡಾದರೆ ನನ್ನ ಪಾಡೇನು?' ಎಂದು ಓಮ್ಮೊಮ್ಮೆ ಎನಿಸುವುದು; ಆದರೆ ಇದು ಬಹಳ ದಿವಸ ನಡೆಯಲಾರದು ಎಂಬ ಒಂದು ಆಶೆ ನನಗೆ ಆಗಾಗ ಧೈರ್ಯ ಕೊಡುತ್ತಲಿತ್ತು. ಇದು ಆರು ತಿಂಗಳು ನಡೆಯಿತು ಈ

ಸುಮಾರಿಗೆ **ಉದಯಶಂಕರ** ಬಂದು ಹೋದ. ಅವನ ಶಿಷ್ಯನೊಬ್ಬ ಇಲ್ಲಿ ಕ್ಲಾಸು ತೆರೆದ. ಇಲ್ಲಿಯ ಕೆಲವು ಮನೆತನಸ್ಥ ಹೆಣ್ಣುಮಕ್ಕಳು ನೃತ್ಯ ಕಲಿಯತೊಡಗಿದರು. ಸಾವೇರಿಗೂ ಆ ಸೋಂಕು ತಗುಲಿತು ಸಂಗೀತ ಶಿಕ್ಷಕನಿಗೆ ಅಪ್ಪಣೆ ದೊರೆಯಿತು. ಸಂಗೀತದ ಬದಲಾಗಿ 'ಕುಣಿಯೋಣು ಬಾರs' ಕಾಲಿಟ್ಟಿತು! ...

....ಒಂದರ್ಥದಲ್ಲಿ ಸಾವೇರಿ ಕುಣಿಸಿದ ಹಾಗೆ ನಾನೇ ಕುಣಿಯುತ್ತಿದ್ದೆ. ಅದಕ್ಕೆ ಕಾರಣ 'ಯಾವುದಾದರೊಂದು ಹವ್ಯಾಸ ಹಚ್ಚಿಕೊಂಡು ಅವಳು ತನ್ನ ಹೊತ್ತನ್ನು ಖುಷಿಯಲ್ಲಿ ಕಳೆಯಲಿ' ಎಂದು. ಸಾವೇರಿ ನೃತ್ಯ ಕಲಿಯು ವುದರಲ್ಲಿ ಪರಿಶ್ರಮಪಡುವಂತೆ ಕಾಣುತ್ತಿದ್ದರೂ ಪ್ರಗತಿ ಕಾಣುತ್ತಿರಲಿಲ್ಲ. ಆದರೆ ಇದರಿಂದ ಒಂದು ಮಾತ್ರ ಲಾಭವಾಯಿತು: ಸಾವೇರಿ ಹೆಚ್ಚಾಗಿ ಉಣ್ಣ ತೊಡಗಿದಳು ಅವಳ ಆರೋಗ್ಯ ಸುಧಾರಿಸಿತು. ಆದರೆ ದುರ್ದೈವ ದಿಂದ 'ಥಕಥೈ' ಕಾಲ ಬಹು ದಿವಸ ಬಾಳಲಿಲ್ಲ. ಅದಕ್ಕೂ ಬೇಗನೆ ಉಚ್ಚಾಟನೆ ದೊರೆಯಿತು!....

....ಕಸೂತಿಗೆ ಕೈನೋವು, ಓದುವುದಕ್ಕೆ ಬೇಜಾರು, ಸಂಗೀತಕ್ಕೆ ಧಸಿ ಸಲ್ಲದು ನೃತ್ಯಕ್ಕೆ ಮೈ ಜಡ! ಯಾವುದನ್ನು ಮಾಡಬೇಕೋ ಅವಳಿಗೆ ತಿಳಿ ಯದು. 'ಹೊತ್ತು ಹೋಗುವುದು ಹ್ಯಾಗೆ?' ಎಂದು ಅವಳಿಗೆ ಸಮಸ್ಯೆ ಯಾದರೆ 'ಹೊತ್ತು ದೊರೆಯುವುದು ಹ್ಯಾಗೆ?' ಎಂದು ನನಗೆ ಸಮಸ್ಯೆ! ಸಂಗೀತ ನೃತ್ಯ ಕಲಿಯುವಾಗ ಅವಳು ನನ್ನ ಗೊಡವೆಗೆ ಬರುತ್ತಿರಲಿಲ್ಲ. ಅಪ್ರತ್ಯಕ್ಷವಾಗಿ ನನಗೇನು ತೊಂದರೆಯಾಗುತ್ತಿತ್ತೊ ಅಷ್ಟೆ! ಅದನ್ನು ನಾನು ಆನಂದದಿಂದ ಸಹಿಸುತ್ತಿದ್ದೆ. ಇವೆರಡೂ ನಿಂತುಹೋದ ಮೇಲೆ ಅವಳ ದೃಷ್ಟಿ ಮತ್ತೆ ನನ್ನ ಮೇಲೆ ವಕ್ರಿಸಿತು. ಎಲ್ಲ ಸಮಸ್ಯೆಗಿಂತ ಸಾವೇರಿ ಯನ್ನು ಖುಷಿಯಲ್ಲಿಡುವುದು ಹ್ಯಾಗೆ?—ಎಂಬ ಸಮಸ್ಯೆ ನನ್ನ ತಲೆಮುಟ್ಟಿ ನಿಂತಿತು........''

ಇದೇ ಸಮಯದಲ್ಲಿ ಅಮೆಚ್ಯುರ್‌ನವರಿಗೆ ನಾನೊಂದು ನಾಟಕ ವನ್ನು ಬರೆದುಕೊಟ್ಟೆ. ಆ ನಾಟಕದೊಳಗಿನ ನಾಯಿಕೆ ಎಂ. ಎ. ಆದವ ಳಿದ್ದಾಳೆ. ಸಾವೇರಿ ತಾನು ಆ ಪಾತ್ರವಹಿಸುವೆನೆಂದು ಹಟಹಿಡಿದಳು. ನಮ್ಮ ಸಮಾಜದ ಈಗಿನ ಕಲಬೆರಿಕೆಯ ಅಪರಿಪಕ್ವ ಸ್ಥಿತಿಯಲ್ಲಿ, ಮನೆ

ತನಷ್ಟ ಹೆಣ್ಣುಮಕ್ಕಳು ನಾಟಕ ಸಿನೇಮಾಗಳಲ್ಲಿ ಭಾಗವಹಿಸುವುದು ಹಿತ ಕರವಲ್ಲವೆಂದು ನಾನು ಹಲವು ಉದಾಹರಣೆಗಳನ್ನು ಕೊಟ್ಟು ಹೇಳಿದರೂ ಅವಳಿಗೆ ಆ ಮಾತು ಒಪ್ಪಿಗೆಯಾಗಲಿಲ್ಲ. ಒಂದೇ ಹಟ ಹಿಡಿದಳು. 'ಒಮ್ಮೆ ಅನುಭವ ಬರಲಿ' ಎಂದು ನಾನೂ ಅನುಮತಿ ಕೊಟ್ಟೆ. ನಾಟಕ ಒಮ್ಮೆ ಆಯಿತು. ಸ್ಟೇಜಿನ ಮೇಲೆ ಏನಾಯಿತೋ ಭಗವಂತನಿಗೇ ಗೊತ್ತು; ಒಹಳ Poor thow ಎಂದು ಕೂಡಿದ ಜನ ಗೇಲಿ ಮಾಡಿದರು. ಅವಳ ಮೇಲೆ ಕಾಗದದ ಸುರುಳಿಯ ವೃಷ್ಟಿಯ ಜತೆಗೆ ಪುಷ್ಪವೃಷ್ಟಿಯೂ ಸಾಕ ಷ್ಟಾಯಿತು. ನಾಟಕ ಮುಗಿದ ಮೇಲೆ ಕಾರಿನಲ್ಲಿ ಮನೆಗೆ ಬರುವಾಗ ಅವಳ ಕಣ್ಣುಗಳಿಂದ ನೀರು ಸುರಿಯುತ್ತಾ ಇತ್ತು. ಅವಳನ್ನು ಪ್ರೈದಡಹಿ ಸಮಾಧಾನ ಪಡಿಸಬೇಕೆಂದು ಬೆನ್ನಮೇಲೆ ಕೈಯಿಟ್ಟೆ. ಕೈಯನ್ನು ಕಿತ್ತೊ ಗೆದು ನನ್ನ ತೊಡೆಗೆ ಬಾಸಳಿಬರುವಹಾಗೆ ಏಟನ್ನು ಹಾಕಿದಳು. ನಾನು ಬುದ್ಧನಂತೆ ನಿರ್ವಿಕಾರವೃತ್ತಿಯನ್ನು ತಾಳಿ—ಆದರೂ ಮುಖದ ಮೇಲೆ ಹುಸಿನಗೆ ತಂದು—ಸರಿದು ಕುಳಿತೆ. ಮರುಕ್ಷಣದಲ್ಲಿಯೆ ನನ್ನ ಹೆಗಲ ಮೇಲೆ ಮುಖ ಇಟ್ಟು, ಆ ಭಾಗವನ್ನೆಲ್ಲ ಕಂಬನಿಗಳಿಂದ ತೋಯಿಸಿಬಿಟ್ಟಳು ಸಾವೇರಿ!....

....ಮುಂದೆ ಕೆಲವು ದಿನ ಅವಳ ಮೈಯಲ್ಲಿ ನೆಮ್ಮದಿ ಇಲ್ಲದಂತಾ ಯಿತು. ಊಟ ಕಡಿಮೆಯಾಗಿ ತಿಂದದ್ದು ದಕ್ಕದಂತಾಯಿತು. ಮೋರೆ ಬಿಳುಪಿಟ್ಟಿತು ಕಣ್ಣು ಒಳನಟ್ಟುವು. ಕುಳಿತಲ್ಲೆ ಕುಳಿತುಬಿಡುವುದು, ಇಲ್ಲವೆ ನಿದ್ದೆಹೋಗುವುದು—ಇಂತಹ ಒಂದು ಆಲಸ್ಯವೊ, ಅಚೈತನ್ಯವೊ, ಅವ ಳಲ್ಲಿ ಕಾಣಿಸಿಕೊಂಡಿತು. ಡಾಕ್ಟರಿಗೆ ಪ್ರಕೃತಿ ತೋರಿಸೆಂದು ಎಷ್ಟು ಹೇಳಿ ದರೂ ಅವಳೇನು ಅದಕ್ಕೆ ಸಮ್ಮತಿಸಲಿಲ್ಲ. ನನಗೂ ಸಿಟ್ಟು ತಡೆಯಲಿಲ್ಲ. 'ನೀನು ಈ ಸ್ಥಿತಿಯಲ್ಲಿ ಹೀಗೆ ಇರುವದಕ್ಕಿಂತ ತವರುಮನೆಗೆ ಹೋಗುವುದೆ ಲೇಸು! ಅಥವಾ ನಾನು ನಿನಗೆ ಬೇಸರವಾಗಿದ್ದರೆ ಕೆಲವು ದಿನ ಇಬ್ಬರೂ ಬೇರೆ ಇದ್ದುಬಿಡೋಣ' ಎಂದುಬಿಟ್ಟೆ. ನನ್ನದೂ ತಲೆತಿರುಕತನವೆ ಅದು! ಸರಿ. ಅವಳೂ ಪಂಗೆಯ ಹಾಗೆ ತನ್ನ ಅರಿವೆ-ಅಂಚಡಿ ಕಟ್ಟಿಕೊಂಡು ತವರುಮನೆಗೆ ಹೊರಟೇ ಬಿಟ್ಟಳು. ಅವಳು ಹೋಗುವಾಗ ನಾನು ಮಾತ ನಾಡಿಸಲಿಲ್ಲ, ಅವಳೂ ಬಿಗಿದುಕೊಂಡೇ ಇದ್ದಳು....

....ಎರಡು ವಾರ ಹೇಗೋ ಗಟ್ಟಿಮನಸ್ಸುಮಾಡಿ ವಿರಹದಲ್ಲಿ ಕಳೆದೆವು. ನಾನೂ ಕಾಗದ ಬರೆಯಲಿಲ್ಲ, ಅವಳಿಂದಲೂ ಕಾಗದ ಬರಲಿಲ್ಲ. ಇದರಲ್ಲಿ ಸೋಲುವವರಾರು? ನಾನಿಲ್ಲಿ ಕೊರಗುತ್ತಿದ್ದೆ, ಅವಳಲ್ಲಿ ಮರಗುತ್ತಿದ್ದಳು. ಆದರೆ ದೇವರಿಗೆ ನಮ್ಮ ಚಿಂತೆ ನಮ್ಮಿಬ್ಬರಿಗೂ ತಿಳಿಯದಂತೆ ಒಳಗೊಳಗೇ ಒಂದು ಒಳಸಂಚು ನಡೆದಿತ್ತು!

"ಈಗೇನೊ mystery ಬಂದಹಾಗಾಯ್ತು ಸ್ವಲ್ಪ" ಗೃಹಸ್ಥನುಡಿದ.

"ಹುಂ, ಒಂದು ದಿನ ಸಾವೇರಿಯ ಪ್ರೊಫಾಯಿಲ್ (Profile) ನಲ್ಲಿರುವ ಒಂದು ತಸಬೀರನ್ನು ಟೇಬಲ್ ಮೇಲಿರಿಸಿ, ಅದರಂತೆಯೆ ರೈಟಿಂಗ ಪ್ಯಾಡಿನಮೇಲೆ ಗೆರೆ ಎಳೆಯುತ್ತಾ ಕುಳಿತಿದ್ದೆ. ಅದು ಸಾವೇರಿಯ ವ್ಯಂಗ ಚಿತ್ರವಾಗುವ ಲಕ್ಷಣ ಕಂಡಿತು. ಅದನ್ನು ತಿದ್ದಿಕೊಳ್ಳುವುದು ಹೇಗೆ ಎಂಬ ವಿಚಾರದಲ್ಲಿದ್ದೆ. ಅಷ್ಟರಲ್ಲಿ ಭಲ್ಲು ಬಂದು ಒಂದು ಕಾಗದ ತಂದುಕೊಟ್ಟ. ಒಡೆದುನೋಡಿದೆ ನಮ್ಮ ಬೀಗನ ಕಾಗದ. ಆದರೆ ಅಕ್ಷರ ಸಾವೇರಿಯವು, ಸಹಿಮಾತ್ರ ಅವನದು ಅದರಲ್ಲಿ ಎರಡೇ ಸಾಲುಗಳು— "ಸಾವೇರಿ ನಿಮ್ಮನ್ನು ಬಹಳ ನೆನೆಯುತ್ತಾಳೆ. ನಾವೆಲ್ಲರೂ ಕುಶಲವಾಗಿದ್ದೇವೆ. ನಿಮ್ಮ ಕುಶಲವಾರ್ತೆ ತಿಳಿಸಬೇಕು." ಕಾಗದದಲ್ಲಿ ಇನ್ನೊಂದು ವಿಶೇಷವಿತ್ತು: Webster Dictionary ಯಂತಹ ಒಂದು ದೊಡ್ಡ ಪುಸ್ತಕದ ಚಿತ್ರವನ್ನು ತೆಗೆದು, ಅದರ ಕೆಳಗೆ 'A book means Prof. Devadatta' ಎಂದು ಬರೆದು, ಕೆಳಗೆ ಸಣ್ಣಕ್ಷರದಲ್ಲಿ ಸಾವೇರಿ ತನ್ನ ಸಹಿ ಮಾಡಿದ್ದಳು....

—ಅದೇ ದಿನ ಪ್ರಯಾಣ ಬೆಳೆಯಿಸಿ ಪುಣೆಗೆ ಬಂದೆ. ಸಾವೇರಿ ಸ್ಟೇಶನಿಗೆ ಬಂದಿರಲಿಲ್ಲ. Odd time (ಅಡ್ಡಹೊತ್ತು) ಎಂದುಕೊಂಡೆ ಬೀಗನ ಜೊತೆಗೆ ಮನೆಗೆ ಬಂದೆ. ಸಾವೇರಿ ಎದುರುಗೊಂಡು ಸ್ವಾಗತಿಸಬಹುದು ಎನಿಸಿತ್ತು. ಅವಳಿಗೆ ಬದಲಾಗಿ ಅವಳಜ್ಜಿ ಎದುರಿಗೆ ಬಂದಳು. ಒಂದು ನಮಸ್ಕಾರ ಹಾಕಿದೆ. ಸೀಮೆಗೆ ಹೋಗಿ ಬಂದವ ಸಾಷ್ಟಾಂಗ ಹಾಕಿದ, ಅಜ್ಜಿಗೆ ಅಷ್ಟೇ ಸಂತೋಷ. "ಗಾಡಿಗಳೀಗ ಸರಿಯಾದ ಹೊತ್ತಿಗೆ ಬರುವುದೇ ಇಲ್ಲ, ಇಷ್ಟು ಹೊತ್ತು ನಿಮ್ಮ ದಾರಿಕಾಯ್ದು ಒರಗಿದ ಹಾಗೆಯೆ ಸಾವೇರಿಗೆ ಜಂಪು ಹತ್ತಿದೆ, ನಾನು ಬೇಕಾಗಿ ಎಚ್ಚರಿಸಲಿಲ್ಲ

ಎಂದು ಮುದುಕಿ ಹೇಳಿದಳು. ಅಷ್ಟರಿಂದ ನನಗೆಲ್ಲಿಯ ಸಮಾಧಾನ? ನೇರವಾಗಿ ಅವಳ ಕೋಣೆಗೆ ಹೋದೆ. ಕೋಚಿನ ಮೇಲೆ, ಎರಡು ದಿಂಬು ತಲೆಯ ಕೆಳಗಿಟ್ಟುಕೊಂಡು ಆಕೆ ಮಲಗಿದ್ದಳು. ಭುಜದ ಮೇಲೆ ಕೈಯಿಟ್ಟು ಮೆಲುದನಿಯಲ್ಲಿ 'ಸಾವೇರಿ' ಎಂದು ಕಿವಿಯಲ್ಲಿ ಉಸುರಿದೆ. ದಿಗ್ಗನೆ ಆಕೆ ಗಾಬರಿಯಿಂದ ಎದ್ದು ಕುಳಿತಳು. ನಾನು ಅವಳ ಮಗ್ಗುಲಲ್ಲಿ ಕುಳಿತೆ. ನನ್ನ ಭುಜದಮೇಲೆ ಕತ್ತಿಟ್ಟು, ಎರಡೂ ತೋಳ್ಗಳಿಂದ ನನ್ನನ್ನಾಕೆ ಬಿಗಿ ದಪ್ಪಿದಳು. ಅವಳ ಕಪೋಲದ ಮೇಲೆ ಬೆರಳುಗಳನ್ನು ಆಡಿಸುತ್ತ ಕೇಳಿದೆ "ಸಾವೇರಿ, ಈಗ ಮೈಯಲ್ಲಿ ನೆಟ್ಟಗಿದೆಯಷ್ಟೆ? ನನ್ನ ಮೇಲಿನ ಸಿಟ್ಟು ಹೋಯಿತೆ?" ಈ ಮಾತಿಗೆ ಉತ್ತರಕೊಡದೆ ಅವಳು ನನ್ನನ್ನು ಕೇಳಿದಳು: "ನಿಮ್ಮ ಓದು-ಬರೆಹ ಈಗ ಸುಸೂತ್ರ ನಡೆದಿರಬಹುದು! ಎಷ್ಟು ಕವನ ಗಳನ್ನು ಕಟ್ಟಿದಿರಿ? ಎಷ್ಟು ಗ್ರಂಥಗಳನ್ನು ಬರೆದಿರಿ?"

"ಇಲ್ಲ, ಈಗ ಅದನ್ನೆಲ್ಲ ಬಿಟ್ಟಿದ್ದೇನೆ!

"ಯಾಕೆ?

"ನೀನು ಇಲ್ಲಿಗೆ ಹೊರಟು ಬಂದಂದಿನಿಂದಲೂ ನನ್ನ ತಲೆಯೆಂಬುದು ಗಾಳಿಗೋಪುರವಾಗಿದೆ! ನನ್ನದಿರಲಿ, ನೀನೇನು ಈಗ ಚಿತ್ರಕಲೆಯ ಅಭ್ಯಾಸ ನಡೆಯಿಸಿದ್ದೀಯಾ?

"ಹುಂ!

"ಯಾರ ಚಿತ್ರ ಮೂಡಿಸಿರುವೆ?

"ಬೇರೆ ಯಾರದು? ನಿಮ್ಮದೇ!

"ನೋಡೋಣ, ಹೇಗಿದೆ?

"ಈಗದು ಕಾಣುವುದಿಲ್ಲ, ನಿಮ್ಮ ಕಣ್ಣಿಗದು ಬೀಳಬೇಕಾದರೆ ಇನ್ನೂ ಆರು ತಿಂಗಳು ಬೇಕು!

"ಅಬ್ಬಾ, ಒಂದು ಚಿತ್ರಕ್ಕೆ ಇಷ್ಟು ದಿವಸ? ನಾನು ಒಂದು ನಿಮಿಷ ದಲ್ಲಿಯೆ ಒಂದು ಚಿತ್ರ ತೆಗೆಯಬಹುದು!

"ಪುರುಷರದಷ್ಟೇ!" ಎಂದು ಗಟ್ಟಿಯಾಗಿ ನನ್ನ ಭುಜವನ್ನು ಕಚ್ಚಿ "ಇನ್ನೂ ನಿಮಗೆ ಅರ್ಥವಾಗಲಿಲ್ಲವೆ?" ಎಂದಳು.

"ಆಯಿತಪ್ಪೋ ಆಯಿತು! ನಿಜವಾಗಿ ಈ ಕಲೆಯಂತಹ ಇನ್ನೊಂದು ಕಲೆಯಿಲ್ಲ, ಹೆಂಗಸರು ಅವಶ್ಯವಾಗಿ ಸಾಧಿಸತಕ್ಕದ್ದು! ಎಂದೆ."

—ಮುಂದೆ ಆರು ತಿಂಗಳಲ್ಲಿಯೆ ಚಂದೂನ ಜನನವಾಯಿತು. ಸಾವೇರಿಗೆ ಈಗ ಚಂದೂನೆ ಕಾವ್ಯ, ಚಂದೂನೇ ನಾಟಕ! ಅವನೇ ಸಂಗೀತ, ಅವನೇ ನೃತ್ಯ! ಈ ತನ್ನ ಪಿಂಡದಲ್ಲಿ ಇಡಿ ಬ್ರಹ್ಮಾಂಡವನ್ನೇ ಅವಳು ಕಾಣುತ್ತಿದ್ದಾಳೆ. ಅದಕ್ಕೇ ನಾನು ನಿನಗೆ ಹೇಳಿದ್ದು— 'ಎರಡನೆಯ ಸಂಬಂಧವಲ್ಲ, ಆದರೆ ಹೆಂಡತಿ ಬೇರೆ ಎಂದು. ಈಗ ಅವಳಲ್ಲಿ ಆಮೂಲಾಗ್ರ ಬದಲಾವಣೆಯಾಗಿದೆ, ಇಷ್ಟೇ ಅಲ್ಲ, ನನ್ನಲ್ಲಿಯೂ ಆಗಿದೆ. ಅದು ನೋಡಿದೆಯಾ— ಹೇಗೆ ಅವಳು ತನ್ನನ್ನೇ ತಾನು ಮರೆತುಬಿಟ್ಟಿದ್ದಾಳೆ. ಕರೆಯುತ್ತೇನೆ, ತಾಳು!" ಎಂದು ದೇವದತ್ತರು ಹೆಂಡತಿಯನ್ನು ಹೆಸರುಗೊಂಡು ಕರೆದರು. ಸಾವೇರಿಬಾಯಿ ಚಂದೂನನ್ನು ಕುರಿಮರಿಮಾಡಿಕೊಂಡು 'ಕುರಿಮರಿ ಬೇಕೇನು, ಕುರಿಮರಿ ಬೇಕೇನು' ಎಂದು ಕೂಗುತ್ತಾ ಒಳಗೆ ಬಂದರು.

ಇಬ್ಬರೂ ಎದ್ದು ನಿಂತರು.

"ನನ್ನ ಬಾಲ್ಯಸ್ನೇಹಿತರ ಪರಿಚಯ ಮಾಡಿ ಕೊಡುತ್ತೇನೆ! ಇವರು ಧೀರೇಂದ್ರರು: ಕಾನಪುರದಲ್ಲಿ ದೊಡ್ಡ ಕೆಲಸದಲ್ಲಿದ್ದಾರೆ. ಹದಿನೈದು ವರ್ಷಗಳ ಮೇಲೆ ಈಗ ಇವರ ಭೆಟ್ಟಿ!" ಎಂದು ದೇವದತ್ತರು ಚಂದೂನನ್ನು ಎತ್ತಿಕೊಂಡು ಧೀರೇಂದ್ರರ ಕೈಯಲ್ಲಿ ಕೊಟ್ಟರು

"ಇದೇನಿದು One Sided introduction?" ಸಾವೇರಿಬಾಯಿ ಎಂದರು.

"ಇಲ್ಲ, ತಮ್ಮ ವಿಷಯವನ್ನೇ ಇದುವರೆಗೆ ಒಂದು ಕಥೆಯಾಗಿ ಹೇಳಿದರು!" ಧೀರೇಂದ್ರ ಹೇಳಿದ.

ಸಾವೇರಿಬಾಯಿ ಕಣ್ಣರಳಿಸಿ, ಸಿಟ್ಟು ಬಂದವರಂತೆ ತೋರಿಸಿ, ಆದರೂ ನಗುತ್ತ ನುಡಿದಳು— 'ಸರಿಹೋಯಿತು. ಈ ಕಥಾವಸ್ತುವೇ—ಕಾವ್ಯವಸ್ತುವೆ!"

ಅದೇ ಹೊತ್ತಿಗೆ ಉಪಹಾರದ ಗಂಟೆ ಆಯಿತು; ಎಲ್ಲರೂ ನಗುತ್ತ ಚಹದ ಕೋಣೆಯತ್ತ ನಡೆದರು

---

# ಬದುಕು-ಬಾಳು

"ನಾವಿಬ್ಬರೇ ತಿರುಗಾಡಲಿಕ್ಕೆ ಹೋಗೋಣ. ನೀವು ಒಂದು ದಿನವಾದರೂ ನನ್ನನ್ನು ಕರೆದುಕೊಂಡು ಹೋಗುವದಿಲ್ಲ!" ಎಂದು ಆಕೆ ಆಗಾಗ ಪೀಡಿಸುತ್ತಾ ಇದ್ದಳು. ಎಲ್ಲ ಸ್ನೇಹಿತರನ್ನೂ ತಪ್ಪಿಸಿ ಒಂದು ದಿನ ಪೋದೆ ಆಕೆಯನ್ನು ಕರೆದುಕೊಂಡು. ನಾಲ್ಕೈದು ಮೈಲು ಸುತ್ತಾಡಿ, ಒಂದು ಬಯಲಲ್ಲಿ ಬಂದು ಇಬ್ಬರೂ ಕುಳಿತೆವು. ಎವೆಯಿಕ್ಕದೆ ಆಕೆ ನನ್ನನ್ನು ನೋಡಹತ್ತಿದಳು.

"ಯಾಕೆ ಹೀಗೆ ನೋಡುತ್ತೀಯಾ!" ಎಂದೆ.

"ನೀವು ಬಲು ಚೆಂದ ಕಾಣುತ್ತೀರಿ, ಸಿನೇಮಾದೊಳಗಾದರೂ ಪಾರ್ಟು ಮಾಡಿರಿ!" ಎಂದಳು.

"ಪಾರ್ಟು ಮಾಡುವವನೇ ಇದ್ದೇನೆ. ಗೊತ್ತಿಲ್ಲೇನು ನಿನಗೆ?"

"ನನಗೇನು ಗೊತ್ತು! ಯಾವ ಸಿನೇಮಾದಲ್ಲಿ! ಸುಳ್ಳೇನಾದರೂ ಹೇಳುತ್ತಾ ಇದ್ದೀರಿ!" ಎಂದಳು.

"ಇಲ್ಲ, ನಿಜವಾಗಿಯೂ!" ಎಂದೆ.

"ಆ ಸಿನೇಮಾದ ಹೆಸರು?" ಎಂದಳು.

"**ರಾಜವಧ**" ಎಂದು ಸುಮ್ಮನೆ ಒಂದು ಬುರುಡೆ ಬಿಟ್ಟೆ.

"ಅಂದರೆ ಕಥೆ ಏನದು!" ಆಶ್ಚರ್ಯದಿಂದ ಕೇಳಿದಳು. ಆಶುಕವಿತೆಯಂತೆ ಒಂದು ಆಶುಕಥೆಯನ್ನು ಅಲ್ಲಿಂದಲ್ಲಿಯೆ ಕಟ್ಟಿದೆ.

"ಒಬ್ಬ ರಾಜನಿರುತ್ತಾನೆ; ಅವನಿಗೆ ಒಬ್ಬಳೇ ರಾಣಿ ಇರುತ್ತಾಳೆ. ಅವಳ ಮೇಲೆ ರಾಜನಿಗೆ ತುಂಬಾ ಪ್ರೀತಿ........"

"ಅದರಲ್ಲಿ ರಾಜ ಯಾರು?" ನಡುವೇ ಕೇಳಿದಳು ಆಕೆ.

"ನಾನು!" ಎಂದೆ.

"ಹಾಗಾದರೆ ನಾನು ರಾಣಿ!" ಎಂದಳಾಕೆ.

"ಆದರೆ ಆಕೆ ವ್ಯಭಿಚಾರಿ ಇರುತ್ತಾಳೆ!" ಛೇಡಿಸುವ ಉದ್ದೇಶದಿಂದ ಎಂದೆ.

"ಹಾಗಾದರೆ ನಾನು ಒಲ್ಲೇ ಒಲ್ಲೆ! ಅಲ್ಲ, ಒಳ್ಳೆಯವಳಾಗಲಿಕ್ಕೆ ಬರುವುದಿಲ್ಲವೇನು ಆಕೆಗೆ?" ಸ್ವಲ್ಪ ಯೋಚನೆಮಾಡಿ ಕೇಳಿದಳು.

"ಆದರೆ ಕಥೆ ಹಾಗಿದೆ; ಸಿನೇಮಾದೊಳಗೆ ಮಾಡೋದು!" ನಾನೆಂದೆ.

"ಸಿನೇಮಾದೊಳಗಾದರೂ ಇಂಥ ಕೆಟ್ಟ ಕೆಲಸ ಮಾಡಿಸಬೇಕೆಂದು ಹೇಳಿದೆಯೇನು? ಅದೆಲ್ಲಾ ನಿಮ್ಮ ಕೈಯಲ್ಲಿರೋದು!" ಎಂದು ಆರೋಪ ಇಟ್ಟಳು.

"ಕಥೆ ಇದ್ದಂತೆ ನಾವು ಹೋಗಬೇಕು" ಎಂದೆ.

"ಕಟ್ಕಿ ಕಥೆ; ಹ್ಯಾಗೆ ಮಾಡಿಕೊಂಡರೇನು? ಇದ್ದಕ್ಕಿದ್ದ ಹಾಗೆ ತೋರಿಸುವದಕ್ಕೆ ಅದೇನು ರಾಮಾಯಣವಲ್ಲ, ಮಹಾಭಾರತವಲ್ಲ! ಇದರಲ್ಲಿ ರಾಣಿ ಒಳ್ಳೆಯವಳೆಂದು ತೋರಿಸಿದರೆ ಬರುವುದಿಲ್ಲೇನು! ಅಂದರೆ ನಾನೂ ನಿಮ್ಮ ಜೊತೆಗೆ ಪಾರ್ಟು ಮಾಡುತ್ತೇನೆ!" ಹೆಮ್ಮೆಯಿಂದ ನುಡಿದಳು.

"ಅಂದರೆ ನಿನಗಾಗಿ ಕಥೆ ಒದಲಾಯಿಸಬೇಕೊ? ಈಗ ಇರುವ ಹಾಗೆ ಇದ್ದರೇನಾಯಿತು! ನಿಜವಾಗಿ ನೋಡಿದರೆ ಹಾಗೆ ಆಕೆ ವ್ಯಭಿಚಾರಿಣಿ ಇರಲಿಲ್ಲ; ಆದರೆ ಇರುವಳೆಂದು ಗಂಡನಿಗೆ—ರಾಜನಿಗೆ—ಸಂಶಯ ಬಂದಿತ್ತು!" ನಾನೆಂದೆ.

'ಅಂದರೆ ನಿಮಗೇ ಹೌದಲ್ಲೋ?" ನನ್ನ ಮೇಲೆ ಹಾಕಿದಳು.

"ಆದರೆ ಅದು ಸಿನೇಮಾದಲ್ಲಿ; ಪ್ರತ್ಯಕ್ಷ ಅಲ್ಲ! ಇಂಥ ದೇವರ ಅವತಾರ ರಾಮಚಂದ್ರ, ಹೆಂಡತಿಯ ಮೇಲೆ ಸಂಶಯ ಪಡಲಿಲ್ಲೇನು!" ಬಾಯಿ ಕಟ್ಟಬೇಕೆಂದು ರಾಮನನ್ನು ತಂದೆ.

"ಹೌದು, ಸೀತಾ ದ್ರೌಪದಿ ಸಮರ್ಥರಿದ್ದರು; ದಕ್ಕಿಸಿಕೊಂಡರು!" ಸಮರ್ಥನ ಮಾಡಿಕೊಂಡಳು.

"ದಕ್ಕಿಸಿಕೊಂಡರೆಂದರೇನು!" ವ್ಯಂಗ್ಯವಾಗಿ ಕೇಳಿದೆ.

"ಅಂದರೆ, ಬೆಂಕಿ ಹೊಕ್ಕು ಬಂಗಾರಾಗಿ ಬಂದರು. ಈಗಿನ ಕಾಲಕ್ಕೆ ಬೆಂಕಿಯಲ್ಲಿ ಹೊಕ್ಕರೆ ಬೂದಿ ಆಗೋದೇ!" ನಿಜಸ್ಥಿತಿ ಹೇಳಿದಳು.

"ನೀನು ಒಲ್ಲೆಯಾದರೆ ಬಿಡು. ನನಗೂ ಅದೇ ಬೇಕಾಗಿದೆ. ಒಬ್ಬ ಚೆಲುವೆಯಾದ ಚಂದ್ರಿಕೆ ಬರುತ್ತಾಳೆ—ನನ್ನ ರಾಣಿ ಆಗುವುದಕ್ಕೆ. ಮುಂದೆ ಕೇಳು ಕಥೆ ಹ್ಯಾಗಿದೆ!" ಕಥೆ ಬೆಳೆಯಿಸುವ ಹುರುಪಿನಿಂದ ನುಡಿದೆ.

"ಆಗಲಿ, ಮುಂದೇನಾಗ್ತದ?" ಕುತೂಹಲಿಯಾಗಿ ಆಕೆ ಕೇಳಿದಳು.

"ರಾಜ ಹೀಗೆ ರಾಣಿಯ ಮೇಲೆ ಸಂಶಯ ಪಡುತ್ತಾನೆ. ಅದು ರಾಣಿಯ ಅಣ್ಣ-ತಮ್ಮಂದಿರಿಗೆ ಸಹನವಾಗುವುದಿಲ್ಲ. ಅವರು ರಾಜನನ್ನು-ಅಂದರೆ ನನ್ನನ್ನು-ಕೊಲ್ಲುತ್ತಾರೆ........
ಆಕೆ ನನ್ನ ಬಾಯ ಮೇಲೆ ಕೈಯಿಟ್ಟು ದೈನ್ಯಧ್ವನಿಯಲ್ಲಿ ಹೇಳಿದಳು;

"ಮರೋ ಬೇಡ, ನಿಮಗೇನು ಹುಚ್ಚುಗಿಚ್ಚು ಹಿಡಿಯಿತೇನು; ಸಂಪತ್ತು ಶುಕ್ರವಾರ, ಮೂರು ಸಂಜೆಯ ಹೊತ್ತು; ಇಂಥ ಅಭದ್ರವೇನಾದರೂ ಆಡಬೇಡಿರಿ!"

"ಅಲ್ಲ, ಸಿನೇಮಾದೊಳಗೆ ಸಾಯೋದು! ನಾಟಕದೊಳಗೆ ಹ್ಯಾಗೆ ಸಾಯ್ತಾರಲ್ಲ, ಹಾಗೇ ಸಾಯೋದು ಇದರಲ್ಲೂ!" ಸಮಾಧಾನ ಹೇಳಿದೆ.

"ಆದರೆ ಸಿನೇಮಾದಲ್ಲಿ ಎಲ್ಲ ಪ್ರತ್ಯಕ್ಷ ಮಾಡಬೇಕಾಗ್ತದಂತೆ!" ಆಕೆಯ ಸಂಶಯ.

"ಸಾಯೋದೊಂದು ಬಿಟ್ಟು ಉಳಿದದ್ದೆಲ್ಲಾ ಪ್ರತ್ಯಕ್ಷ ಮಾಡಬೇಕಾಗುತ್ತದೆ!" ನನ್ನ ಸಮಾಧಾನ.

"ಸುಖವಾಗಿದ್ದೀವಿ. ಸುಳ್‌ಸುಳ್ಳೆ ಸಾಯೋದ್ಯಾಕೆ?" ಆಕೆಯ ತಕರಾರು.

"ದೊಡ್ಡ ದೊಡ್ಡ ವಿವಾ ಇಳಿಸಿದ ಮಂದಿ, ರೊಕ್ಕ ಸಿಗ್ತದೆ ಅಂತ ನಿಜವಾಗಿಯೇ ಸಾಯ್ತಾರಂತೆ! ಸುಳ್ಳೇ ಸತ್ತರೆ ರೊಕ್ಕ ಸಿಗ್ತದೆ. ಯಾಕೆ ಬ್ಯಾಡಾ?" ಆರ್ಗ್ಯುಮೆಂಟು ಮುಂದುವರಿಸಿದೆ.

"ಕೆಟ್ಟದ್ದು ಎಂದಿಗಾದರೂ ಕೆಟ್ಟದ್ದೇ! ಅದರಿಂದ ಲಾಭ ಆದರೂ ನಮಗೆ ಬ್ಯಾಡ!" ಆಕೆಯಲ್ಲಿ ನೀತಿಯ ಸಂಚಾರವಾಯ್ತು.

"ಆದರೆ ಆ ಸಿನೇಮಾದೊಳಗೆ ನಾನು ಸಾಯಲೇ ಬೇಕಾಗಿದೆ!" ಆಗುವುದನ್ನು ಹೇಳಿದೆ.

'ಹಾಗೆ ಸಾಯೋದೇ ಇದ್ದರೆ, ದೇವರನ್ನ ತಂದು ಪುನಃ ಬದುಕಿಸಲಿಕ್ಕೆ ಬರೋದಿಲ್ಲೇನು? ಈಗೇನು, ಎಲ್ಲ ಸಿನೇಮಾದಾಗೂ ದೇವರನ ತರ್ತಾರೆ!" ಆಶೆಯ ಕಿರಣ ಮೂಡಿತು.

"ಆದರೆ ನಮ್ಮ ಸಿನೇಮಾದಾಗ ದೇವರನ್ನ ತರಲೇ ಬಾರದು ಅಂತ!" ನಿರ್ಧಾರ ಹೇಳಿದೆ.

"ದೇವರನ್ನ ತರದಿದ್ದರೆ ದೇವೀನ್ನ ತೊಗೊಂಡು ಬರ್ರಿ! ಹಾಗಾದರೆ ನಾನು ದೇವಿ ಆಗಿ ಬಂದು ನಿಮ್ಮನ್ನು ಬದುಕಿಸ್ತೀನಿ." ಹುರುಪಿಗೆ ಬಂದಳು.

"ನೀ ದೇವಿ ಆಗಿ ಬಂದರೆ ನಾನು ನಿನ್ನ ಕಾಲು ಬೀಳಬೇಕಾಗ್ತದೆ ನೋಡು ಮತ್ತೆ! ಈ ಮಾತು ಒಪ್ಪಿಗೆಯೇನು ನಿನಗೆ" ಧರ್ಮ ಸಂಕಟ ಮುಂದೆ ಮಾಡಿದೆ.

"ಸತ್ತಿರ್ತೀರಲ್ಲ....ಆಗ ಕಾಲೇನು ಬಿಳ್ತೀರಿ?" ಮಾತಿನಲ್ಲಿ ಸಿಕ್ಕೆ ಎಂದು ಕೊಂಡಳು.

"ಸತ್ತರೂ ಬೀಳುವುದಿಲ್ಲೆಂದ ಮೇಲೆ ಎದ್ದ ಮೇಲೇನು ಕಾಲಿಗೆ ಬೀಳ್ತೀನಿ ಬಿಡು! ಒಟ್ಟಿನ ಮೇಲೇನು ಗಂಡಸರು ಹೆಂಗುಸರ ಕಾಲಿಗೆ ಇದ್ದಾಗಲೂ ಬೀಳುವ ಹಾಗಿಲ್ಲ, ಸತ್ತಾಗಲೂ ಬೀಳುವ ಹಾಗಿಲ್ಲ!" ಪುರುಷಭಾವ ಮೈದೋರಿತು.

"ನೀವು ನನ್ನ ಕಾಲಿಗೆ ಬೀಳುವುದೇ ಬೇಡ. ನಾನೇನೋ ನಿಮ್ಮನ್ನು ಬದುಕಿಸುವವಳೇ!" ಹೆಣ್ತನ ನುಡಿಯಿಸಿತು.

"ಈಗ ನೀನು ಅದನ್ನೇ ಮಾಡ್ತಾ ಇದ್ದೀ! ನನ್ನ ಬದುಕು ನಿನ್ನ ಉಡಿಯಲ್ಲಿ; ನಿನ್ನ ಬಾಳು ನನ್ನ ಕೈಯಲ್ಲಿ!" ಅಂತರಾತ್ಮ ಆಡಿಸಿತು

ಅವಳ ಹತ್ತಿರ ಹೋದೆ. ಮೈಗೆ ಮೈ ಹೊಂದಿಕೊಂಡವು. ರಸ್ತೆಯ ಮೇಲಿನ 'ಲೈಟು' ಗಳೂ ಝಗ್ಗನೆ ಹತ್ತಿದುವು. ಬೆಳಕಿನಲ್ಲಿ ಮನೆಗೆ ಬಂದೆವು.

# ಸರಸೀ ಕೂಡ ಸಿನೆಮಾ.

## ೧ನೆಯ ಸುರುಳಿ

"ಸರಸಿ, ಯಾಕೆ ಇಂದು ಸಪ್ಪಗಿದ್ದೀಯಾ ? ಮೈಯಲ್ಲಿ ನೆಮ್ಮದಿಯಷ್ಟೇ ?"

ನನಗೇನಾಗಿದೆ ? ನೆಟ್ಟಗೆ ಕಲ್ಲಿನ್ಹಾಗಿದ್ದೇನೆ! "

ಇಲ್ಲ ಹೇಳು ಏನಾದರೂ ಆಗಿರಬೇಕು, ಅವ್ವ ಸಿಟ್ಟು ಮಾಡಿದಳೊ ? "

"ಛೀ ಇಲ್ಲ !"

"ಅಪ್ಪ ಏನಾದರೂ ಆಡಿದರೊ ?,,

"ಅದೂ ಇಲ್ಲ!,,

"ಹಾಗಾದರೆ ಮುಖ ಯಾಕೋ ಇಳಿದ ಹಾಗಿದೆ. ಏನೋ ಒಂದು ಕಾರಣ ಇರಲೇ ಬೇಕು ? ,,

ಏನೋ ಜೀವಕ್ಕೆ ಬೇಜಾರು ?,,

ನಮ್ಮ ಮದುವೆ ಆಗಿ ಆರು ವರ್ಷ ಆಯಿತು. ಇದುವರೆಗೆ ಉಂಟಾಗದ ಅಸಮಾಧಾನ ಇಂದೆಯೆ ತಲೆದೋರಲು ಕಾರಣ ?

"ಹಾಳು ನಮ್ಮ ಜೀವನ? ದಿನಬೆಳಗು ಅದೇ ಸಾರಣಿ-ಉಪಕರಣಿ, ಅದೆ ಕಸ–ಮುಸುರೆ, ಅದೇ ಅಡಿಗೆ-ಊಟ! ಮಾಡಿದ್ದೇ ಮಾಡುವದು, ಹಾಡಿದ್ದೇ ಹಾಡುವುದು ? ಗಾಣದೆತ್ತಿನ್ಹಾಗೆ ನಮ್ಮದೂ ಈ ಚಕ್ರದ ಹೊರಗೆ ಒಂದು ಹೆಜ್ಜೆ ಕೂಡ ಬೀಳುವ ಹಾಗಿಲ್ಲ? ನೀವು ಮಾತ್ರ ಸ್ವತಂತ್ರರು; ಮನಬಂದಂತೆ ಮೋಜು ಮಾಡಬಹುದು !"

"ನಾವೂ ನಿಮ್ಮ ಹಾಗೆಯೇ ದುಡಿದು ದುಡಿದು ಸಣ್ಣಾಗುತ್ತೇವೆ. ಮೋಜು ಮಾಡುವುದಕ್ಕೆ ಹೊತ್ತೆಲ್ಲಿದೆ ? ಎಂದಾದರೂ ನಮಗೆ ಬಿಡುವು ದೊರೆತ ಹಾಗೆ ನಿಮಗೂ ದೊರೆಯುವದಿಲ್ಲವೇನು? ,,

"ಬರೇ ಬಿಡುವು ದೊರೆತರೆ ಬಂದಿತೇನು ? ಮತ್ತೆ ಮನೆಯಲ್ಲಿಯೇ ಸಾಯಬೇಕು.... ಹೊತಿಟ್ಟವರ್ಹಾಗೆ ? ನಿಮ್ಮ ಹಾಗೆ ಬೇಕಾದದ್ದನ್ನೆಲ್ಲಾ

ಮಾಡಲಿಕ್ಕೆ ನಮಗೆಲ್ಲಿ ಸ್ವಾತಂತ್ರ್ಯವಿದೆ? ಮೇಲಾಗಿ ಯಾವುದಕ್ಕೂ ದುಡ್ಡು ಬೇಕು— ಆ ದುಡ್ಡಿಗಾಗಿ ಮತ್ತೆ ನಿಮಗೇ ನಾವು ಬಾಯಿ ತೆರೆಯಬೇಕು!''

"ತೆರೆದರೆ ತಪ್ಪೇನು? ಕೇಳಿದಾಗ ನಾವು ಕೊಟ್ಟೇಕೊಡುತ್ತೇವೆ."

"ಬಹಳ ಕೊಡ್ತೀರಿ! ಗುಡಿಗೆ ಹೋದರೆ ಒಂದಾಣೆ. ಸಿನೇಮಾಕ್ಕೆ ಹೋದರೆ ಎರಡಾಣೆ.. ಈ ದರ ಸಿರ್‌ಕಾಗಿ ಹೋಗಿದೆ!''

"ಹೌದು, ಅವಕ್ಕೆ ಅಷ್ಟೇ ಬೇಕಾಗುವುದು; ಅಷ್ಟೇ ಕೊಡ್ತೇವೆ!''

"ಅಲ್ಲ, ನೀವು ಹೊರಗೆ ಬೇಕಾದ ಷೋಕೀ ಮಾಡಬಹುದು! ನಾವು? ನಮಗೂ ಆಟ ಬೇಕು, ನೋಟ ಬೇಕು, ತಿನಿಸು ಬೇಕು, ತಿರುಗಾಟ ಬೇಕು! ಇಂಥವೇನೂ ನಾವು ಮಾಡಬಾರದೇನೋ!''

"ಬೇಲಾಷಕ್ ಮಾಡಬಹುದು! ಆದರೆ ಅದಕ್ಕೆ ನೀವೇ ಮೊದಲು ಸಿದ್ಧರಿಲ್ಲ."

"ಅದ್ಯಾಕೆ? ನೀವು ಜೊತೆಗಿದ್ದರೆ ನಾವು ಯಾವುದಕ್ಕೂ ತಯಾರು!"

"ಜೊತೆಗೆ ನಾವೇಕೆ ಬೇಕು?''

"ನೀವು ಬೇಕೇಬೇಕು. ನಿಮ್ಮನ್ನು ಬಿಟ್ಟು ಏನು ಮಾಡಲಿಕ್ಕೂ ನಮಗೆ ಮನಸ್ಸಾಗುವುದಿಲ್ಲ!''

"ಅದೆಲ್ಲಾ ಸುಳ್ಳು! ಮನಸ್ಸಾಗುವುದಿಲ್ಲವೆಂತಲ್ಲ, ಧೈರ್ಯವಾಗುವುದಿಲ್ಲ!"

"ಅದಿರಲಿ, ನನ್ನನ್ನು ಕೂಡಿಕೊಂಡು ಏನೂ ಮಾಡಬೇಕೆಂದೆನಿಸುವುದಿಲ್ಲ ನಿಮಗೆ?''

'ಅದೇಕೆ, ಸಂಸಾರವನ್ನೇ ಮಾಡುತ್ತಿದ್ದೇನಲ್ಲ!"

"ಇಂಥ ಮಾತಿಗೇನೂ ಕಡಿಮೆ ಇಲ್ಲ! ನನ್ನ ಬಾಯಿ ಕಟ್ಟಿದರೂ ಮನಸನ್ನ ಕಟ್ಟಲಾರಿರಿ!''

"ನಿನ್ನ ಮನಸ್ಸಿನಲ್ಲಿರುವುದಾದರೂ ಏನು? ಒಮ್ಮೆ ಹೇಳಿ ಬಿಡು! ನೀನು 'ಹೀಗಾಗಲಿ' ಅಂದರೆ ಹಾಗೆ ಮಾಡಿ ಬಿಡೋಣ!''

'ಉಳಿದದ್ದಿರಲಿ. ಒಂದು ಸಿನೇಮಾಕ್ಕೆ ಹೋಗುವ ಮಾತನ್ನೇ ಎಷ್ಟೋ ದಿವಸದಿಂದ ಅಂದುಕೊಳ್ತಾ ಇದ್ದೇನೆ !''

ಅದೇನಪ್ಪ ಕಠಿಣವಾದ ಮಾತು ? ಇದುವರೆಗೆ ಎಷ್ಟೋ ಫಿಲ್ಮ ಗಳನ್ನು ನೋಡಿದ್ದೀಯೆ ! ಹಾಗೇ ಇನ್ನೂ ನೋಡಬಹುದು !''

''ಆದರೆ ಯಾವಾಗಲೂ ಹೋದ ಹಾಗೆ ಅಲ್ಲ; ಈಗ ಹೋಗುವ ರೀತಿ ಬೇರೆ !''

'ಅಂದರೆ' ?

''ನೀವೇ ಊಹಿಸಿರಿ, ಏನಿರಬೇಕು? ''

''ತಲೆಯಿಂದ ನಡೆದುಹೋಗುವುದಿರಬೇಕು !''

''ಅದರಲ್ಲಿ ಸ್ವಲ್ಪ ತಲೆ ನಡೆಯಿಸಿದರೆ ತಲೆಯಿಂದ ನಡೆಯುವ ಕಾರಣವಿಲ್ಲ !''

''ನಮ್ಮ ತಲೆ ಸರಕಾರಕ್ಕೆ ಒತ್ತಿ ಇದೆ—ನಮ್ಮ ಸ್ವಾಧೀನ ಇದ್ದರೆ ನಡಿಸಬೇಕಲ್ಲವೆ?''

' ಅಷ್ಟರ ಮಟ್ಟಿಗೆ ನಮ್ಮ ಸ್ವಾಧೀನ ಬಿಟ್ಟಿದ್ದಾರೆ ಅವರು!''

' ಹಾಗಾದರೆ ನನ್ನ ಹೆಗಲ ಮೇಲೆ ಕೂತು ಹೋಗುವುದಿರಬೇಕು!,,

''ಸ್ವಲ್ಪ ತಪ್ಪಿದಿರಿ ಹೆಗಲಮೇಲಲ್ಲ—ಹೆಗಲಿಗೆ ಹೆಗಲು ಹಚ್ಚಿ ಮಗ್ಗಲಿಗೆ ಕುಳಿತು ನೋಡಬೇಕೂ ಅಂತ!,.

'ಭಪ್ಪರೆ ಹುಡಿಗಿ! ನಿನ್ನಲ್ಲೂ ರಸಿಕತೆ ಹೆಚ್ಚಾಗಿದೆ! ಆಗಲಿ, ನನಗಿದು ಒಪ್ಪಿಗೆ ! ಆದರೆ ನೀನು ಬಗುವ ವಿಚಾರ ನೋಡು. ನಾವು ಸಿನೇಮಾಕ್ಕ ಕೂಡಿ ಹೋದರೂ, ಎಂದೂ ಕೂಡಿ ಕುಳಿತಿಲ್ಲ. ನೀನು ನನ್ನ ಜೊತೆಗೆ—ಗಂಡಸರ ಮಧ್ಯದಲ್ಲಿ—ಕುಳಿತುಕೊಳ್ಳಲು ಸಿದ್ಧಳಿದ್ದರೆ, ನನ್ನದೇನೂ ಅಭ್ಯಂತರವಿಲ್ಲ!,,

· ನಾನು ಮೊದಲೇ ಹೇಳಿದ್ದೇನೆ. ನೀವು ಜೊತೆಗಿದ್ದಮೇಲೆ ನಾನು ಎಲ್ಲಿ ಕೂಡಲಿಕ್ಕೂ ತಯಾರ್ !''

''ಅಂತೂ ಪರವಾ ಇಲ್ಲ ನಮಗೂ ಇಂಥ ಹೆಂಡಿರು ಇದ್ದರೆ ಸಂತೋಷ!,,

''ಆದರೆ ಇದರಲ್ಲಿ ಒಂದು ಕರಾರ ನನ್ನದು !,.

"ಅದೇನದು ಪುತ್ತಿ?,,

' ಇದು ಮನೆಯಲ್ಲಿ ಗೊತ್ತಾಗಬಾರದು, ಹೊರಗೂ ಗೊತ್ತಾಗ ಬಾರದು!,,

"ಅಂದರೆ ನಾವು ಸಿನೇಮಾ ನೋಡುವಾಗ ಥಿಯೆಟರಿನಲ್ಲಿ ಯಾರೂ ಇರಕೂಡದು, ಸಿನೇಮಾಕ್ಕೆ ಹೋಗುವಾಗ ಬರುವಾಗ ಯಾರೂ ನಮ್ಮನ್ನು ನೋಡಕೂಡದು. ಮನೆಯಲ್ಲಂತೂ ಈಸುದ್ದಿ ತಿಳಿಯಲೇ ಬಾರದು. ಒಂದಕ್ಕಿಂತ ಒಂದು ಅಸಾಧ್ಯ ಮಾತು! ಈ ವಿಚಾರವನ್ನೇ ಬಿಟ್ಟುಕೊಡೋಣ. ಇವೆಲ್ಲ ಕನಸಿನ ರಾಜ್ಯದ ಮಾತು. ಆಗೋ ಹಾಗಿಲ್ಲ, ಹೋಗೋಹಾಗಿಲ್ಲ! ,,

"ನನ್ನ ವಿಚಾರ ನಾನು ಹೇಳಿದೆ; ಅದಕ್ಕೆ ಹಂಚಿಕೆ ತೆಗೆಯುವವರು ನೀವು ! ನಿಮಗೆ ಅನಿಸುವುದಿಲ್ಲವೇನು—ನನ್ನ ಜೊತೆಗೆ ಕೂತು ಸಿನೇಮಾ ನೋಡಬೇಕೂ ಅಂತ ? ಎಷ್ಟೋ ಜನ ಈಗ ಹೋಗ್ತಾರೆ; ಕೂಡಿಯೆ ಕುಳಿತುಕೊಳ್ಳುತಾರೆ! ,,

"ರಾಜಾ-ರಾಣಿ ಹಾಗೆ ಇಬ್ಬರೇ ಇರಬೇಕು; ಇಲ್ಲವಾದರೆ ಮನೆಯಲ್ಲಿ ನವನಾಗರಿಕತೆಯ ರೀತಿಯಾದರೂ ಇರಬೇಕು! ನಮ್ಮಲ್ಲಿ ಎರಡೂ ಇಲ್ಲ!,,

"ಹೋಗಲಿ, ಕಳ್ಳತನದಿಂದ ಒಮ್ಮೆ ಹೋಗುವುದೂ ಅಸಾಧ್ಯವೇ?,,

"ಕಳ್ಳತನ ದಕ್ಕಿದರೆ ಪರವಾ ಇಲ್ಲ; ಬಯಲಿಗೆ ಬಿದ್ದರೆ ಕಷ್ಟ ! ನನಗೆ ತೊಂದರೆ ಇಲ್ಲ; ನಿನ್ನ ವಿಷಯ ನೋಡು!,,

ಹೋಗಲಿ ಬಿಡಿ, ನಿಮಗೆ ಮನಸ್ಸಿಲ್ಲ. ಸುಖವನ್ನು ಪಡೆದು ಬಂದಿರ ಬೇಕು. ನಮ್ಮ ಅದೃಷ್ಟಕ್ಕಿದೆ ಒಲೆ, ಊದುಗೊಳವೆ !,,

"ಒಮ್ಮೆಲೆ ಹೀಗೆ ನಿರಾಶಳಾಗಬೇಡ, ಅದಕ್ಕೂ ಕಾಲ ಬಂದೀತು!,,

"ಆ ಕಾಲ ಬರುವುದರೊಳಗಾಗಿ ನಮ್ಮ ಕಾಲ ಹೋಗಿಬಿಟ್ಟರೆ ?.,

"ಸ್ವಲ್ಪ ಸಮಾಧಾನ ತಾಳು. ಏನಾದರೊಂದು ಯುಕ್ತಿ ತೆಗೀತೆನೆ?,,

**೨ನೆಯ ಸುರುಳಿ**

"ಏನು! ಎಲ್ಲರಿಗೂ ನಾಳೆ ನಾಯಕರ ಮದುವೆಯ ಆಮಂತ್ರಣ ಬಂದಿದೆ. ಅಪ್ಪ ಅವ್ವ ಅಂತೂ ಹೋಗಲೇಬೇಕು. ನಾನು ಆಫೀಸಿನ ನೆವಾ ಹೇಳಿ ಉಳಿದುಬಿಡುತ್ತೇನೆ. ನೀನೂ ಏನಾದರೂ ನೆವತೆಗೆದು ಹೋಗುವುದನ್ನು

ತಪ್ಪಿಸು ! ಅಂದರೆ ನಾಳೆ ಸಾಯಂಕಾಲ ಸಿನೇಮಾದ 'ಪ್ರೋಗ್ರಾಮು' ಸುಸೂತ್ರ ಸಾಧಿಸಬಹುದು !

"ನಿಮಗೆ ಆಫೀಸಿನ ನೆವ ಇದೆ. ನಡೆಯಬಹುದು. ನಾನೇನು ನೆವ ತೆಗೆಯಲಿ ?

"ಕಸಾರಿಕೆ ಅಥವಾ ಮುಟ್ಟು. ಎರಡರಲ್ಲಿ ಯಾವುದೂ ನಡೆಯಬಹುದು."

"ಥೂ, ಎರಡೂ ಸಾಧ್ಯವಿಲ್ಲ. ಅದೇನು ನೆನಸಿದಾಗ ಬರುವ ಮಾತೇ ?"

"ಹಾಗಾದರೆ ನೀನೇ ಯುಕ್ತಿಯನ್ನು ತೆಗೆ"

"ನನ್ನಿಂದಾಗದು-ಎಂದು ಮೊದಲೇ ಹೇಳಿದ್ದೇನೆ !"

"ಸ್ನೇಹಿತರ ಮನೆಯಲ್ಲಿ ಇಬ್ಬರಿಗೂ ಊಟದ ಆಮಂತ್ರಣ ಇದೆ ಎಂದು ಹೇಳಿದರೆ—?"

"ಇದನ್ನು ಮೊದಲೇ ಹೇಳಬೇಕಾಗಿತ್ತು. ಈಗ ಹೇಳಿದರೆ ಮಾವನವರಿಗೆ ಸಂಶಯ ಬಂದೀತು !"

"ಪರಸ್ಥಳದಿಂದ ಒಬ್ಬ ಸ್ನೇಹಿತನೇ ಬರ್ತಾನೆ ಎಂದು ಹೇಳೋಣ!"

"ಅವರು ಬಾರದಿದ್ದರೆ-"

"ಬರುವುದೇ ಇಲ್ಲ. ಸುಳ್ಳೇ ಹೇಳುವುದು !"

"ಹೌದು. ಬರಲಿಲ್ಲ ಎಂಬುದು ಗೊತ್ತಾದರೆ ?"

"ಗಾಡಿ ತಪ್ಪಿದ್ದೀತು, ಬಂದಿರಲಿಕ್ಕಿಲ್ಲ ಎಂದು ಹೇಳಬೇಕು."

"ಆಮೇಲೆ ಮದುವೆ-ಮನೆಗೇಕೆ ಬರಬಾರದು—ಎಂದು ಅತ್ತೆಯವರು ಕೇಳಿದರೆ ?"

"ಅದೇನಿಲ್ಲ-ಮೊದಲಿಗೆ ನಾನು ಹೇಳಿದ ಉಪಾಯಗಳೇ ಯೋಗ್ಯ. ನೀನು ಸುಮ್ಮನೆ ಹೊಟ್ಟೆ ಶೂಲಿಯ ಸೋಗು ತೆಗೆ. 'ಭಯಂಕರ ಹೊಟ್ಟೆ ಶೂಲಿ, ಪ್ರಾಣಾಂತಿಕ ಹೊಟ್ಟೆಶೂಲಿ' ಎಂದು ಬೊಬ್ಬೆಯಿಡು! ಉಳಿದದ್ದನ್ನೆಲ್ಲಾ ನಾನು ನೋಡಿಕೊಳ್ಳುತ್ತೇನೆ !"

"ಸರಿ, ಒಪ್ಪಿಗೆ ! ಇದನ್ನು ಯಾವಾಗ ಪ್ರಾರಂಭ ಮಾಡಿ ಯಾವಾಗ ಮುಗಿಸಬೇಕು? "

"ಹೊತ್ತುಂಟಲೆ ಪ್ರಾರಂಭ ಮಾಡಬೇಕು, ಅಪ್ಪ-ಅವ್ವ ಹೊಸ್ತಿಲು ಬಿಟ್ಟು ಹೊರಬಿದ್ದ ಕೂಡಲೆ ನಿಲ್ಲಿಸಬೇಕು !"

"ಇದಕ್ಕೆ ಔಷಧ ?"

"ಸಿನೇಮಾ ನೋಡುವುದು !"

"ಅನುಪಾನ ?"

"ಬೇರೆಯೇನು, ಚಹಾಪಾನ !"

"ಬೇಷ್, ಬೇಷ್ ! ಎಲ್ಲವೂ ಸರಿಹೋಯಿತು ? ಸಿನೇಮಾಕ್ಕ ಹೋಗುವಾಗ ಪತ್ತಲ ಉಡಲೊ, ಸೀರೆ ಉಡಲೋ ?"

"ಉಡೋದನ್ನೆಲ್ಲ ಉಟ್ಟುಬಿಡು, ನನ್ನನ್ನೇನೂ ಕೇಳಬೇಡ ಈ ವಿಷಯ ! ಒಟ್ಟು, ನೀನು ನನ್ನ ಹತ್ತಿರ ಕೂತಾಗ ನಾನು ಚೆಂದಾಗಿ ಕಂಡಿರ ಬೇಕು !"

'ಮತ್ತೆ ನೀವು ನನ್ನ ಹತ್ತಿರ ಕೂತರೆ ನಾನೂ ಅಂದವಾಗಿ ಕಂಡಿರ ಬೇಕು! "

* * * *

## ೩ನೆಯ ಸುರುಳಿ

"೧೧-೩೦ ಕ್ಕೆ ಅಕ್ಕೀಕಾಳು, ಪುಣ್ಯಾಹವಾಚನ ವ್ಯಾಳ್ಯಕ್ಕ ಉಡುಗೊರೆ ಕೊಡಬೇಕು. ಎಲ್ಲರು ಲಗೂನೇ ಹೋಗೋಣ ! ನೀನೂ ನಿನ್ನದೆಲ್ಲಾ ಜಾಗ್ರತೆ ಮುಗಿಸು ! ಹೊರಡೋ ವ್ಯಾಳ್ಯಕ್ಕ ಸಲೂನಿಗೆ ಹೋಗಿ ಕೂಡಬ್ಯಾಡ !"

"ಸಲೂನ-ಬಲೂನ ಏನಿಲ್ಲ; ಆದರೆ ಈ ಹೊತ್ತು ಪ್ರಾಂತಸಾಹೇಬ 'ತಪಾಸಣಿಗೆ' ಬರ್ತಾರ; ನಾನು ಮದುವೆಗೆ ಬರುವಹಾಗಿಲ್ಲ!"

"ಸಾಹೇಬರಿಗೆ ಹೊತ್ತು ವ್ಯಾಳ್ಯಾ ಇಲ್ಲವೇ ಇಲ್ಲs ಕೇಳಿದಹಾಗೆಲ್ಲ 'ತಪಾಸಣಿs' ಏನು ತಪಾಸಣಿನೋ—ಅವರ ಹಿಂದೇಕೂಳ್s"

"ನೀ ಬರದಿದ್ದರಷ್ಟೇ ಹೋಯಿತು. ಸರಸಿಗಾದರೂ ಹೇಳು! ಎದ್ದಾಳೋ, ಇನ್ನೂ ಮಲಗೇ ಇದ್ದಾಳೊ ?,,

"ಆಕೆಗೆ ಹೊಟ್ಟೆಶೂಲಿ—ಬೆಳತನಕ ಕಣ್ಣಿಗೆ ಕಣ್ಣು ಹತ್ತಲಿಲ್ಲ—ಬಹಳ ಒದ್ದಾಡಿದಳು!"

"ಈಗ?"

"ಹಾಗೇ ಇದೆ, ಎಳಷ್ಟೂ ಕಡಿಮೆ ಇಲ್ಲ!"

"ಹೊರಡೋ ಹಾಗೆ ಇಲ್ಲವೇನು ಹಾಗಾದರೆ ?"

'ಲಕ್ಷಣವೇನೋ ಹಾಗಿದೆ!"

"ಸರಿಹೋಯಿತು ! ಸರಸಿಗೆ ಹೊಟ್ಟೆಶೂಲಿ, ನಿನಗೆ ಸಾಹೇಬರ ತಪಾಸಣೆ....ನೀವಿಬ್ಬರೂ ಬಿದ್ರಿ....ನಾವಿಬ್ಬರೇ ಮುದುಕರು ಹೋಗುತ್ತೇವೆ; ಸಮಾರಂಭದಲ್ಲಿ ನಾವೇ ಓಡಾಡತೇವೆ....ಬಚ್ಚಬಾಯಿ ಮಾಡಿಕೊಂಡು !"

"ಅಲ್ಲಪ್ಪಾ ಪರಿಸ್ಥಿತಿಯೇ ಹಾಗೆ ಗಂಭೀರವಾಗಿದೆ."

"ತಲೆ ಬೋಳಿಸಿತು. ಅದಿರಲಿ, ಸರಸಿಗೆ ಔಷಧ ? ಅಜವಾನದ ಅರ್ಕದೆ ಮನೆಯಲ್ಲಿ; ಅದನ್ನು ಒಂದು ಹಳಕು ಕೊಡು. ನಿನ್ನೆ ಒಬ್ಬಾಕಿಯು ದೊಡ್ಡಕೊಡ ಹೊತ್ತು ನೀರು ತಂದ್ಲು; ಬಟ್ಟೆ ಸರಿದಿದೆಯೋನೋ, ಪಾಪ ಹುಡುಗಿಗೆ ?"

"ಬಟ್ಟೆ ಸರಿದಹಾಗೆ ಕಾಣುವುದಿಲ್ಲ; ಇನ್ನೇನಾದರೂ ಆಗಿರಬೇಕು."

"ಮತ್ತೇನು ಆಗತದೆ? ನಿನ್ನ ತಾಯಿಗೆ ಹೇಳು—ಸ್ವಲ್ಪ ಬಟ್ಟೀ ತಿಕ್ಕು ಅಂತ!"

"ಯಾಕದೆಲ್ಲಾ, ಸ್ವಲ್ಪ ಹೊತ್ತಿಗೆ ತಾನೇ ನಿಲ್ಲಬಹುದು."

"ಅದು ಹ್ಯಾಗೆ ಗೊತ್ತು?"

"ಅಲ್ಲ, ಅಂದಾಜು !"

"ನಿನ್ನ ಅಂದಾಜು ನಿನಗೇ ಇರಲಿ, ಮೊದಲು ಆ ಔಷಧ ಕೊಡು."

"ನೀವು ಮದುವೆ ಮುಗಿಸಿಕೊಂಡು ಬರೋದು ಯಾವಾಗ ?"

"ನಾಳೆ ಮುಂಜಾನೆ! ಇಂದು ನಾಯಕರು ನಮ್ಮನ್ನು ಬಿಡಲಿಕ್ಕಿಲ್ಲ ಒಂದು ವ್ಯಾಳ್ಯಾ ಬಂದರೂ ರಾತ್ರಿ ಬರಬಹುದು."

"ಯಾಕ ಸುಮ್ಮನೆ! .. ಕತ್ತಲು ದಿವಸ ನಾಳೇ ಬಂದುಬಿಡ್ರಿ! ಆಕೆಗೆ ಗುಣ ಅನಿಸಿದರೆ ಸಾಯಂಕಾಲ ನಾವೂ ಬರ್ತೇವೆ!"

* * * *

## ಆನೆಯ ಸುರುಳಿ

"ಹ್ಯಾಗಿದೆಯಮ್ಮಾ, ಹೊಟ್ಟೆಶೂಲಿ?"

"ಅಯ್ಯೋ... ! ಹುಟ್ಟಿದ ಮೇಲೆ ಇಂಥ ಹೊಟ್ಟೆಶೂಲಿ ಬಂದಿರಲಿಲ್ಲ-ಅಮ್ಮಾ ! ಬಾಧೆ ಅಂದರೆ ವಿಚಿತ್ರ ಬಾಧೆ!"

"ಬಟ್ಟೆ ಸರಿದಿರಬೇಕು!"

"ಭಗವಂತನಿಗೇ ಗೊತ್ತು!"

"ಹೊಟ್ಟೆ ತಿಕ್ಕಲೇನು?"

"ಶೂಲಿ ಹೆಚ್ಚಾಗಬಹುದು!"

"ಅಜ್ವಾನದ ಅರ್ಕ ಕೊಡಲೇ?"

"ಕಾವಾಗಬಹುದು!"

"ಹಾಗಾದರೆ ಏನು ಮಾಡಲಿ?"

"ಏನೂ ಬೇಡ, ನೀವು ಹೋಗಿರಿ; ತುಸು ಹೊತ್ತಿಗೆ ತಾನೇ ಕಡಿಮೆ ಆಗಬಹುದು."

"ಮದುವೆಯಲ್ಲಿ ಎಲ್ಲರ ಜೊತೆಗೆ ಉತ್ಸಾಹದಿಂದ ಓಡಾಡುತಿದ್ದೆ. ಸುಟ್ಟ ಹೊಟ್ಟೆನೋವು ಇಂದೇ ಬರಬೇಕೆ?"

"ಸಮಾರಂಭ ನೋಡೋ ಭಾಗ್ಯ ಇಲ್ಲ ಕಡಿಮೆ ಅನಿಸಿದರೆ ಬರ್ತೇನೆ!"

"ಆಗಲಿ. ಅನ್ನಕ್ಕಿಟ್ಟು ಹೋಗ್ತೇನೆ—ಮುಕ್ತನ್ನ ಅನ್ನ ಉಂಡು ಮಲಗಿಬಿಡು! ಸಾಧ್ಯವಾದರೆ ಮುಕುಂದನಿಗೆ ಒಡಿಸು, ಇಲ್ಲವಾದರೆ ಅವನೇ ಹಾಕಿಕೊಂಡು ಊಟ ಮಾಡಲಿ!" "ಅವರು ಬಹಳ ಆಗ್ರಹ ಮಾಡಿದರೆ ಇಂದು ಇದ್ದು ನಾಳೆ ಬರ್ತೇವೆ.

ಮೈಯಲ್ಲಿ ಪಾಪ, ನೆಟ್ಟಗಿಲ್ಲ. ಅಲ್ಲಿ ಹೋದರೂ ನನ್ನ ಜೀವಕ್ಕೆ ನಿನ್ನದೇ ಚಿಂತೆ!''

''ಛಿ, ಛಿ. ಹಾಗೆ, ಚಿಂತೆ ಹಚ್ಚಿಕೊಳ್ಳಲಿಕ್ಕೆ ನನಗೇನಾಗಿದೆ? ಜ್ವರ ಅಲ್ಲ, ಚಳಿ ಅಲ್ಲ. ಸುಮ್ಮನೆ ಹೊಟ್ಟೆಶೂಲಿ!''

'ರೋಗ ಯಾವುದೇ ಇದ್ದರೂ ಬಾಧೆ ಅಷ್ಟೇ? ಬರ್ತೇನೆ, ನೀ ಎದ್ದು ಕೆಲಸ-ಗಿಲಸ ಮಾಡಬೇಡ. ನಾಳೆ ಬಂದು ನಾ ಎಲ್ಲ ಮಾಡ್ತೇನೆ—''

* * * *

## ೫ ನೆಯ ಸುರುಳಿ

''ಸರಸಿ, ಅತ್ತೆ ಮಾವ ಹೋದರು. ನಿನ್ನ ಹೊಟ್ಟೆಶೂಲಿ?''

''ಅದೂ ಅವರ ಜೊತೆಗೇ ಹೋಯಿತು!''

''ನಾನು ಆಫೀಸಿಗೆ ಹೋಗಲೇ?''

''ಬೇಡ, ಹೊಟ್ಟೆಶೂಲಿ ನಿಜವಾಗಿಯೇ ಬಂದೀತು!''

ಹಾಗಾದರೆ ಏನು ಮಾಡೋದು?''

''ರಜೆಗೆ ಬರೆಯೋದು!''

''ಪ್ರಾಂತ ಸಾಹೇಬನ 'ತಪಾಸಣಿ'?''

''ಮನೆಯಲ್ಲೇ ಆಗಲಿ!''

''ಒಳ್ಳೇದು, ಯಾವ ಶೋಕ್ಕೆ ಹೋಗುವುದು?''

''ಯಾವ ಶೋಕ್ಕೆ ಹೋದರೇನು? ನಮ್ಮ ಶೋಕೀ ಆದ ರಾಯಿತು.''

''ಅಲ್ಲಿ ಕೂಡುವುದೆಲ್ಲಿ?''

''ಬಾಕ್ಸ (Box) ನಲ್ಲಿ!''

''ಶಾಬ್ಬಾಸ್! ಅಂತೂ ಹೆಂಗಸರಿಗೆ ಸ್ವಾತಂತ್ರ್ಯ ಕೊಟ್ಟು ನೋಡ ಬೇಕು!—''

'[illegible] ಹಾಗೇ ಜೀವ!''

"ಅದೂ ನಿಜ, ಸರಿ, ರಜೆಗೆ ಬರೆದು ಬರ್‍ತೇನೆ."

"ಆಗಲಿ !"

*　　*　　*

## ೬ನೆಯ ಸುರುಳಿ

"ಇವರು ಯಾರು ?"

"ನಮ್ಮೂರ ಶಾನುಭೋಗ !"

"ಇಂದೆಯೆ ಬಂದರು.."

"ನಮಗೆ ಮೂಲಾಗಿ!"

"ಏನಂತೆ ಕೆಲಸ ?"

"ಏನೊ ನಮ್ಮ ಹೊಲದ ವಿಷಯ, ಅಪ್ಪನ್ನ ಕೇಳಬೇಕಂತೆ"

"ಮನೆಯಲ್ಲಿ ಅವರು ಇಲ್ಲ—ಎಂದು ಹೇಳಬೇಕು !"

"ಹೇಳಿದೆ, ಅಪ್ಪ ಬರುವವರೆಗೆ ಇರುವರಂತೆ !"

"ನಮ್ಮ ಸಿನೇಮಾದ ಗತಿ ?"

"ತಪ್ಪಿಸಿ ಹೋಗಬೇಕು!"

"ಹ್ಯಾಗೆ ?"

"ನಾವೂ ಮದುವೆ—ಮನೆಗೆ ಹೋಗಬೇಕು ಅಂತ ಹೇಳಿ ಹೊರ ಬೀಳೋದು; ಮದುವೆಯ ಮನೆಗೆ ಹೋಗುವುದೇ ಥೀಯೆಟರಿಗೆ ಹೋಗುವುದು!"

"ಶಾನಭೋಗನಿಂದ ಈ ಮಾತು ಮಾವನವರಿಗೆ ತಿಳಿದರೆ ? ಅದು ಹಾಗಿರಲಿ, ಮನೆಯನ್ನು ಶಾನಭೋಗನ ಮೇಲೆ ಬಿಟ್ಟು ಹೋದರೆ ಗತಿ ಯೇನು?"

"ಛೆ! ಹಾಗೆ ಮಾಡಲಿಕ್ಕಾಗದು, ಅದಕ್ಕೆ ಹೀಗೆ ಮಾಡೋಣ! 'ಸಂಜೆ ಐದು ಗಂಟೆಗೆ ಅವನನ್ನು ಹೊರ ಗೆಕಳಿಸುವುದು!"

"ಹತ್ತು ಗಂಟೆಗೆ ತಿರುಗಿ ಬಾ' ಎಂದು ಹೇಳುವುದು!"

"ಅಷ್ಟರಲ್ಲಿ ?"

"ನಾವು ಸಿನೇಮಾ ನೋಡಿ ಬರುವುದು!"

"ಈ ಗುಟ್ಟು ರಟ್ಟಾದರೆ?"

"ನಮ್ಮ ಫಜೀತಿಗೆ ಪಾರವೇ ಇಲ್ಲ!"

"ಏನಾಗುವುದೋ ಆಗಲಿ!"

"ದೇವರಿದ್ದಾನೆ"

* * * *

## ಎರಡನೆಯ ಸುರುಳಿ

"ಯಾವ ಸ್ಥಳದಲ್ಲಿ ಕೂಡೋಣ?"

"ನೀನು ಹೇಳಿದ ಸ್ಥಳದಲ್ಲಿ ಕೂಡೋಣ!"

"ನಮ್ಮ ಹಿಂದೆ ಮುಂದೆ ಜನ ಹೆಚ್ಚಿರಬಾರದು!"

"ಸ್ವಲ್ಪ ತಡೆ, ಹಾಗಾದರೆ ಒಳಗೆ ನೋಡಿಬರ್ತೇನೆ!"

(ಥಿಯೇಟರಿನಲ್ಲಿ ನೋಡಿ ಬಂದು)

"ಸರಸಿ, ಫಜೀತಿಗೆ ಬಂತು!"

"ಯಾಕೆ?"

"ಫಸ್ಟ್ ಕ್ಲಾಸಿನಲ್ಲಿ ಪ್ರಾಂತ ಸಾಹೇಬರು, ಸೆಕಂಡ್ ಕ್ಲಾಸಿನಲ್ಲಿ ಶ್ಯಾನುಭೋಗ!"

"ಮುಂದೆ?"

"ಏನು ಮಾಡೋಣ ನೀನೇ ಹೇಳು!"

"ಪ್ರಾಂತಸಾಹೇಬರಿದ್ದರೆ ಕಚೇರಿಯಲ್ಲಿ. ಇಲ್ಲಿ ಕೇಳುವವರ್‍ಯಾರು?"

"ಆ ಚರ್ಚೆ ಮನೆಯಲ್ಲಿ ಮಾಡೋಣ, ಇಲ್ಲಿ ಬೇಡ!"

"ಈ ಸುಟ್ಟ ಊರಲ್ಲಿ ಒಂದೇ ಸಿನೇಮಾ. ಇಲ್ಲಿಯ ಶ್ರೀಮಂತರಿಗೆ ಇನ್ನೊಂದು ಥಿಯೇಟರು ಕಟ್ಟಿಸಲಿಕ್ಕೇನು ಧಾಡಿ?"

"ಈ ಮಾತಿನ ಅರೆದಾಟ ಬುಕಿಂಗ್ ಆಫೀಸಿನ ಎದುರಿಗೆ ಬೇಡ!"

"ಸರಸಿ, ನನ್ನ ಮಾತು ಕೇಳ್ತೀಯಾ?"

"ಏನು?"

"ನೀನು ಹೆಂಗಸರ ಸ್ಥಳದಲ್ಲಿಯೇ ಕೂತುಬಿಡು! ಮತ್ತೆಂದಾದರೂ ಕೂಡಿ ಕೂಡೋಣವಂತೆ!

"ಆ ಮಾತಾಗದು!

"ಆಗೋದೆಲ್ಲ ಆಗಲಿ! ನಡೆ, ಒಳಗೂ ಈಗ ಬೆಳಕನ್ನು ತೆಗೆದಿದ್ದಾರೆ!

* * * *

## ಆನೆಯ ಸುರುಳಿ

"ಆಗಲೆ ಪ್ರಾರಂಭವಾಗಿದೆಯಲ್ಲ ಫಿಲ್ಮು?"

"ಹೌದು, ನಮಗಾಗಿ ಅವರು ನಿಲ್ಲುವುದಿಲ್ಲ!

"ಏನಿದು ಕಥೆ?"

"ನಮ್ಮ ಮನೆ."

"ಅಂದರೆ?"

"ಮೊದಲು ನೋಡು, ಆ ಮೇಲೆ ಹೇಳುತ್ತೇನೆ!"

"ಮುಂದೆ ಕೂತವರ ಟೊಪ್ಪಿಗೆ ಅಡ್ಡ ಬರುತ್ತಾ ಇದೆ!'

"ಅದಕ್ಕೇನು ಮಾಡುವುದು?"

"ಸ್ವಲ್ಪ ಅವರಿಗೆ ಹೇಳಿ ಟೊಪ್ಪಿಗೆ ತೆಗೆಯಿರಿ—ಎಂದು."

"ನೀನೇ ಸರಿದು ಸಂದಿನೊಳಗಿಂದ ನೋಡು!"

"ಥೂ ಏನಿದು ಹಾಳು ವಾಸನೆ?"

"ನನ್ನ ಮಗ್ಗುಲಿನವರು ಚಿರೂಟು ಸೇದುತ್ತಿದ್ದಾರೆ."

"ನನಗೆ ಈ ವಾಸನೆ ಸಹನವಾಗದು, ಅವರಿಗಾದರೂ ಹೇಳಿ!

"ಹಾಗೆ ಹೇಳುವುದು ಅಸಭ್ಯತನ!"

"ಹುಶ್ ಶ್ ಶ್!"

"ಯಾರವರು?"

"ಹಿಂದೆ ಕುಳಿತವರು!"

"ಏನು, ಹೀಗೆ?"

"ನಾವು ಮಾತಾಡುತ್ತೇವೆಂದು ಅವರಿಗೆ ಬೇಸರು!"

(ತುಸುಹೊತ್ತು ಸುಮ್ಮನಿದ್ದು ಪುನಃ)

"ಇವರು ಅವಳ ಗಂಡನಿಗೇನು ಆಗಬೇಕು ?"

"ಅವರಾಗಿ ಹೇಳಿದರೆ ಕೇಳಿಕೊ ? ಇಲ್ಲವಾದರೆ ಸುಮ್ಮನೆ ಕೂತು ನೋಡಿಕೊ !"

"ಮಾತು ಮಾತಿಗೂ ಇಂವ ಹೇಣ್ತಿಗೆ ಗುಂಡಿನ ಬೆದರಿಕೆ ಹಾಕುತ್ತಾನೆ !

"ಅವನಲ್ಲಿರುವುದು ಅದೇ ಒಂದು !"

"ರಾಯರೆ, ನಿಮ್ಮ ಸತಿ-ಪತಿಯ ಸಲ್ಲಾಪವನ್ನು ಸ್ವಲ್ಪ ನಿಲ್ಲಿಸಿದರೆ ಉಪಕಾರವಾದೀತು !" ಹತ್ತಿರ ಕುಳಿತವನೆಂದ.

"ಸರಸಿ ಎಷ್ಟು ಸಾರೆ ಹೇಳಿದರೂ ನಿನಗೆ ತಿಳಿಯುವುದಿಲ್ಲ-- ಇನ್ನು ಮಾತಾಡಿದೆಯೆಂದರೆ ಮಾರಾಮಾರಿಗೆ ಬಂದೀತು ಪ್ರಸಂಗ. ಕೈಮುಗೀತೇನೆ ಸುಮ್ಮಗಿರು."

* * * *

## ೯ನೆಯ ಸುರುಳಿ

"ಏನು ಮನೆಗೆ ಕೀಲಿ!

"ಇವರಿಬ್ಬರೂ ಎಲ್ಲಿಗೆ ಹೋದರೊ?"

"ಯಾರಿಗೆ ಗೊತ್ತು ? ಇನ್ನೇನು ಮಾಡುವುದು ?"

"ಮನೆ ಬಿಟ್ಟು ಹೋಗಲಿಕ್ಕೆ ಸರಸಿಗೂ ತಿಳಿಯಬಾರದೆ?"

"ಮುಂಜಾನೆ ಹೊಟ್ಟೆಶೂಲಿ ಎಂದು ಹಾಸಿಗೆ ಹಿಡಿದಿದ್ಲು.

"ಮುಕುಂದ ಅವಳನ್ನು ಡಾಕ್ಟರನ ಕಡೆಗೆ ಕರೆದುಕೊಂಡು ಹೋಗಿದ್ದಾನೇನೋ !

"ಇದ್ದರೂ ಇರಬಹುದು, ಅವಳು ಹಾಗೆ ಮನೆ ಬಿಟ್ಟು ಹೋಗುವಾಕೆಅಲ್ಲ. ಹ್ಯಾಗಿದೆಯೊ, ಹುಡಿಗ್ಗೆ ಹೊಟ್ಟೆಶೂಲಿ ? ನಾವು ಬಂದದ್ದು ನೆಟ್ಟಗಾಯಿತು !"

"ಈಗೇನು ಮಾಡೋಣ ! "

"ಬರುವವರೆಗೆ ಬಾಗಿಲಲ್ಲಿ ಕೂಡೋಣ !"

## ೧೦ನೆಯ ಸುರುಳಿ

"ಟಾಂಗಾ ಬಂದಂತಾಯಿತು. ಅವರು ಬಂದಿರಬಹುದು !"

"ಮುಕುಂದಾ! "

"ಏನಪ್ಪಾ ?" (ಹೆಂಡತಿಯ ಕಿವಿಯಲ್ಲಿ 'ಅಪ್ಪ-ಅವ್ವ ಬಂದಿದ್ದಾರೆ. )

"ಡಾಕ್ಟರ ಕಡೆಗೆ ಹೋಗಿದ್ದೆಯೇನು, ಸರಸಿನ್ನ ಕರಕೊಂಡು? "

"ಹೌದಪ್ಪಾ" (ಹೆಂಡತಿಗೆ ಕಿವಿಯಲ್ಲಿ)- "ಹೊಟ್ಟೆಶೂಲಿ ಮತ್ತೆ ಸುರುವಾಗಲಿ— !"

"ಏನಂದರು ಡಾಕ್ಟರರು?"

"ಏನೂ ಹೇಳಲಿಲ್ಲ. ಒಂದು ಇಂಜೆಕ್ಶನ್ ಹಾಕಿದರು. "

(ಸರಸಿಯನ್ನು ಕೈಹಿಡಿದು ಕೆಳಗಿಳಿಸಿ ಕರೆತರುತ್ತಾನೆ.)

"ಈಗ ಹ್ಯಾಗಿದೆ ?"

"ಕಡಿಮೆ ಆಗತಾ ಇದೆ. ಒಳ್ಳೇ ಇಂಜೆಕ್ಶನ್ ಕೊಟ್ಟರು. ಇನ್ನು ಇಂಥ ಹೊಟ್ಟೆಶೂಲಿ ಎಂದೂ ಬರಲಿಕ್ಕಿಲ್ಲ—ಎಂದು ಹೇಳಿದರು. "

"ಎಷ್ಟು ಖರ್ಚಾಯಿತು ?"

"ಎಲ್ಲ ಸೇರಿ ಎರಡು ರೂಪಾಯಿ ನಾಲ್ಕಾಣೆ !"

"ದುಡ್ಡು ಹೋದದ್ದಕ್ಕೆ ದುಃಖವಿಲ್ಲ. ಬೇನೆ ಕಡಿಮೆ ಆಯಿತು. ಸಾಕು ! "

"ಅಪ್ಪಾ, ಶ್ಯಾನುಭೋಗರು ಬಂದಿದ್ದಾರೆ !"

"ಅವರೆಲ್ಲಿ ಹಾಗಾದರೆ ?"

"ಊರಲ್ಲಿ ಒಬ್ಬ ಗುರುತಿನವರ ಮನೆಗೆ ಹೋಗಿದ್ದಾರೆ. ನಾಳೆ ಬರ್ತಾರಂತೆ !"

"ಏನು ಕೆಲಸವಂತೆ ?"

"ನಮ್ಮ ಹೊಲದ ವಿಷಯ—ಎಂದು ಹೇಳಿದರು ."

"ತಾರಾತಿಗಡಿ ಮುಂಡೇಮಗಾ !"

"ರಾತ್ರಿ ಕೂಳಿಗೆ ಇಲ್ಲೇ ಇರಬೇಕು ಎಂದು ಮಾಡಿದ್ದ ನಾನೇ 'ಮದುವೆ ಮನೆಗೆ ಹೋಗಬೇಕು' ಎಂದು ಸುಳ್ಳು ಹೇಳಿ ಅವನನ್ನು ಹೊರಗೆ ಹಾಕಿದೆ. ಇವಳ ಮೈಯಲ್ಲಿಯೂ ನೆಟ್ಟಗಿರಲಿಲ್ಲ !"

"ಹೌದು, ಪಾಪ, ನೆಟ್ಟಗಿಲ್ಲದಾಗಲೂ ವಿಶ್ರಾಂತಿ ಬೇಡವೆ?"

"ಬಾಗಿಲ ತೆರೆ. ಚಳಿ ಬಹಳ ಆಗ್ತಾ ಇದೆ. ನಾವು ಇಲ್ಲಿ ಕೂತು ಮುಕ್ಕಾಲು ಗಂಟೆಯು ಮೇಲಾಯಿತು!"

*   *   *   *

## ೧೧ನೆಯ ಸುರುಳಿ

"ಅಲ್ಲ, ಡಾಕ್ಟರ ವಿಷಯ ನಿಮಗೆ ಹ್ಯಾಗೆ ತೋಚಿತು!"

"ಅಪ್ಪನ ಮಾತೇ ಉಪಾಯವಾಯಿತು!"

"ಬಾಗಿಲಿನಲ್ಲಿ ಅವರನ್ನು ನೋಡಿದಾಗ ನಾನಂತೂ ಹೌಹಾರಿ ಹೋಗಿದ್ದೆ. ಟಾಂಗಾದಿಂದ ಇಳಿಯುವ ತ್ರಾಣ ಉಳಿದಿರಲಿಲ್ಲ!"

"ನಿನ್ನ ಹೊಟ್ಟೆಶೂಲಿ ಸಾಮಾನ್ಯವೆ?"

"ದೇವರೇ ಪಾರು ಮಾಡಿದ!"

"ಇಂಥ ಮಾತಿನಲ್ಲಿ ದೇವರು ಕೈಹಾಕುವದಿಲ್ಲ. ಇದರ ಶ್ರೇಯ ಸ್ಸೆಲ್ಲ..........."

"ನಿಮ್ಮ ಬುದ್ಧಿಗೆ!"

"ಅಲ್ಲ ನಿನ್ನ ಹೊಟ್ಟೆಶೂಲಿಗೆ!"

"ಹತ್ತು ಸುಳ್ಳಾಡಿ, ಶೂಲಿಯ ಸೋಗು ಮಾಡಿ, ಸಿನೇಮಾ ನೋಡಿದಾದರೂ ಸುಖ ಎನಿಸಲಿಲ್ಲ!"

"ಸುಖ ಸ್ವಾತಂತ್ರ್ಯದಲ್ಲಿದೆ;"

"ಅವೆರಡೂ ನಮಗಿರಲಿಲ್ಲ!"

"ಹುಸಿಯಾಟ ಹೇಸಿ!"

# ಕುಡಿದ ಕಣ್ಣೀರು

ಶಾಲೆಯ ಕೆಲಸ ಮುಗಿಸಿಕೊಂಡು ಆಗ ಮನೆಗೆ ಬಂದಿದ್ದೆ. ಅಂದು ಬೆಳಗಿನಲ್ಲಿ ಬಂದುದೊಂದು ಪತ್ರ ಟೇಬಲ್ ಮೇಲಿತ್ತು. ಕುರ್ಚಿಯಮೇಲೆ ಕುಳಿತು ಪತ್ರ ಒಡೆದು ಓದಿದೆ. ಅದು ನನ್ನೊಬ್ಬ ಸ್ನೇಹಿತನ ಪತ್ರ; ಈ ಪತ್ರಕ್ಕಾಗಿ ನಾನು ಎಂಟೂನೆಂಟು ದಿನಗಳಿಂದ ದಾರಿಕಾಯುತ್ತಲಿದ್ದೆ. ಒಬ್ಬರಲ್ಲಿ ಸಾಲ ಕೇಳಿದ್ದೆ, 'ಇಲ್ಲ' ಎಂದು ಅದರಲ್ಲಿ ಉತ್ತರವಿತ್ತು. ಪತ್ರ ಮಡಿಸಿ ಕಿಸೆಯಲ್ಲಿಟ್ಟು, ಹಾಗೆಯೆ ಎದ್ದು ಕೋಟು ಟೊಪ್ಪಿಗೆ ತೆಗೆಯ ಹತ್ತಿದೆ. ತಲೆಯಲ್ಲಿ ಏನೇನೊ ವಿಚಾರ. ಅಂದೆಯೆ ನನ್ನ ಕ್ಲಾಸಿಗೆ ಇನ್‌ಸ್ಪೆಕ್ಟರರು ಬಂದು ಹೋಗಿದ್ದರು. ನಾನು ಕಲಿಸುವ ರೀತಿ ಅವರಿಗೆ ತೃಪ್ತಿಕರವೆನಿಸಲಿಲ್ಲ. **ಬಿ. ಟಿ.** ಗೆ ಹೋಗದಿದ್ದರೆ ಕೆಲಸ ನಿಲ್ಲಲಾರದೆಂದು ಹೆಡ್‌ಮಾಸ್ತರರು, ಒಬ್ಬನನ್ನೆ ಕರೆದು ಪರ್ಯಾಯವಾಗಿ ನನಗೆ ಸೂಚಿಸಿದ್ದರು. ಇದೇ ವಿಚಾರವೆ ಹಲವು ರೂಪ ತಳೆದು ದಾರಿಗುಂಟ ತಲೆಯಲ್ಲಿ ತಾಂಡವವಾಡುತ್ತಿದ್ದಿತು. ಬೆಳಗಿನಿಂದಲೂ ಒಂದು ಕಪ್ ಚಹಕೂಡ ಕುಡಿದಿರಲಿಲ್ಲ. ಶಾಲೆಗೆ ಹೋಗುವಾಗ, ಇನ್‌ಸ್ಪೆಕ್ಟರರು ಬರುವರೆಂದು ಅವಸರ; ಹೋದಮೇಲೆ, ಕ್ಲಾಸು ಬಿಟ್ಟು ಕದಲಲೇ ಇಲ್ಲ. ತಲೆ ದಿಮುಗುಡಹತ್ತಿತ್ತು. ಆಗಾಗ ಸಣ್ ಸಣ್ ಎಂದು ತಲೆಯಲ್ಲಿ ಸಿಡಿಯುತ್ತಾ ಇತ್ತು. ಪತ್ರ ಮುಗಿಸಿದ ಮೇಲೆ ತಲೆನೋವು ಹೆಚ್ಚಾಯಿತು. ಎರಡೂ ಕೈಯ ಹೆಬ್ಬೆರಳುಗಳಿಂದ ಹಣೆಯ ಮುಲುಕನ್ನು ಹತ್ತಿಕ್ಕಿ ಹಿಡಿದು, ಹಾಗೆಯೆ ಒಳಗೆ ಬಂದೆ. ಹೆಂಡತಿ ಮತ್ತು ತಾಯಿ ಅಡಿಗೆಮನೆಯಲ್ಲಿ ಇದ್ದರು. ತಾಯಿ ಅಡಿಗೆ ಮಾಡುತ್ತಿದ್ದಳು; ಹೆಂಡತಿ ಸೀರೆ ಉಟ್ಟುಕೊಳ್ಳುತ್ತಾ ಇದ್ದಳು. ಅವ್ವನ ಮುಖ ಒಲೆಯ ಕಡೆಗಿತ್ತು. ನಾನು ಅಡಿಗೆಮನೆಯ ಬಾಗಿಲಲ್ಲಿ ಬಂದು ನಿಂತಾಗ ಅವಳು ನನ್ನನ್ನು ನೋಡಲಿಲ್ಲ. ಈಕೆ 'ಸುಮ್ಮಗಿರಿ' ಎಂದು ಸನ್ನೆ ಮಾಡಿದಳು. ಅಲ್ಲೇ ಸ್ವಲ್ಪ ಸರಿದು ಮರೆಗೆ ನಿಂತೆ. ತಾಯಿಯ ಸಿಡಿನುಡಿ ಕೇಳಿಸಿತು: "ಒಯ್ಯಾರ ಮಾಡಿಕೊಂಡು ತಿರುಗಲಿಕ್ಕೆಬೇಕು.... ಇಟ್ಟಾಳಲ್ಲ, ಅಡಿಗಿಯಾಕಿನ್ನs ಅಂತ ನಸ್ನಿಲ್ಲೆ! ಯಾವ ಬೋಕಾಣಿ ಬಂದರೂ ನಾನು ಡಿಳೋದೇನೂ ತಪ್ಪೂದಿಲ್ಲ! ಸೊಟ್ಟದೊಂದು ಮಾಸ್ತರ

ಕೀಗೇ ಈಕೀ ದಿಮಾಕು ಇಷ್ಟು; ಇನ್ನ ಗಂಡಗ ದೊಡ್ಡದೊಂದು ಕೆಲಸ ಸಿಕ್ಕಿದ್ದರ ಎಷ್ಟು ಮಾಡ್‌ತಿದ್ಲೊ ರಮಣಿ! ಇನ್ನೂ ಸೀರೀ ಉಡೋ ಸಂಭ್ರಮಾನೇs ನಡದsದ....! ಗಂಡನ ಮುಂದ ತೋರಿಸಬೇಕಲ್ಲಾ ಫ್ಯಾಶನ್ನು....!"

ಅವ್ವ ಹೀಗೆ ನುಡಿಯುವಾಗ ಈಕೆಯು ಕಡೆಗೆ ನೋಡಿದಳು. ಅವಳಿಗೆ ಕಾಣಿಸಿದೆನೋ ಏನೋ ಎಂದು ನಾನು ಮುಂದೆ ಬಂದೆ. "ಏನು, ಆಯಿತೇನು? ಈಕೆ ಎಲ್ಲಿ ಹೋಗಿದ್ದಳು ಮುಂಜಾನೆ?" ಎಂದು ಅವ್ವನ ಹತ್ತಿರ ಹೋಗಿ ಕೇಳಿದೆ.

"ಆಕಿನ್ನs ಕೇಳು! ನನಗೆ ಹೇಳಿ ಹೋಗತಿದ್ದರ ಗೊತ್ತಿರಬೇಕು! ಮನಸಿಗೆ ಬಂದಲ್ಲಿ ಹೋಗತಾರ....ಮನಸಿಗೆ ಬಂದಲ್ಲಿ ಕೂಡತಾರ! ನನಗ ಹೇಳಿ ಹೋಗಲಿಕ್ಕೆ ನಾಯಾರು ಆಕಿಗೆ? ಇದ್ದೀಯಲ್ಲ, ಮಾಡಿಕೊಂಡ ಗಂಡ!.... ನೀನೇ ಕೇಳು!"

"ಅತ್ತೆಯವರಿಗೆ ಹೇಳೇ ಹೋಗಿದ್ದೆ. ರುಕ್ಮಿಣಿಗೆ ಪಥ್ಯದ ಅಡಿಗೀ ಮಾಡಿ ಹಾಕಿ ಬಂದೆ ಆಕೆಯ ಗಂಡ ಊರಲ್ಲಿಲ್ಲ!" ನಾನು ಕೇಳದಲೆ ಆಕೆ ತಾನಾಗಿ ಉತ್ತರಕೊಟ್ಟಳು

'ಮನೀ ಕೆಲಸಾ ಬಿಟ್ಟು, ಈ ಊರ ಉಸಾಬರಿ ಯಾತಕ್ಕ ಬೇಕಾಗಿದ್ದೀತಪ್ಪಾ— ಈಕಿಗೆ? ನೀನs ನೋಡು, ಮುಂದಿಗೆ ಉಪಕಾರಮಾಡಲಿಕ್ಕೆ ಹೋಗ್ಯಾಳ! ಇದ್ದೇನಲ್ಲಾ ಮನ್ಯಾಗ...ಕತ್ತೀಹಾಂಗ ದುಡೀಲಿಕ್ಕೆ!"

'ನಾ ಬಂದು ಮಾಡತಿದ್ದೆ ಅಡಿಗೀನ!"

"ಈಗ ಮಾಡ್ತಾ ಇದ್ದಿಯಲ್ಲಾ!"

ನನಗೆ ಅದೇನೋ ಹುಚ್ಚುಸಿಟ್ಟು ಒಂದು ಬಿಟ್ಟಿತು. ಮೂಲೆಯಲ್ಲಿ ಬಟ್ಟೆ ಒಣಹಾಕುವ ಕೋಲಿತ್ತು; ಅದರ ಕಡೆಗೆ ದೃಷ್ಟಿ ಹೋಯಿತು. ಎರಡೇಟು ಹಾಕಿ ಬಿಡಬೇಕೆಂದು ತಲೆಯಲ್ಲಿ ಒಂದು ವಿಚಾರ ಬಂದು ಬಿಟ್ಟಿತು. ಕೋಲನ್ನು ತಕ್ಕೊಂಡೆ, ಅದನ್ನು ನೋಡಿ ಆಕೆ ನಡುಮನೆಗೆ ಓಡಿಹೋದಳು. ನಾನೂ ಬೆನ್ನಟ್ಟಿ ಹೋಗಿ ಚೆನ್ನಾಗಿ ಎರಡೇಟು ಸೆಳೆದೆ, ಬೆನ್ನಮೇಲೆ ಬಿದ್ದುವು. ಮತ್ತೆ ಎರಡೇಟು ಬಿಗಿದೆ; ಒಂದು ರಟ್ಟೆಯಮೇಲೆ, ಇನ್ನೊಂದು ಕಾಲಿನಮೇಲೆ ಬಿದ್ದುವು. ನೆಲಕ್ಕೆ ಬಿದ್ದು ಅಳತೊಡಗಿದಳು.

ನಾಲ್ಕೈದು ಏಟು ಹೊಡೆಯುವವರೆಗೆ ಅವ್ವ ಒಲೆಯ ಮುಂದೆಯೆ ಕುಳಿತಿದ್ದಳು. ಆಕೆ ಒದ್ದಾಡಿ ಚೀರಿ ಅಳಹತ್ತಿದ ಮೇಲೆ, ಮುಸುರೆಯ ಕೈಯಿಂದ ಹಾಗೆಯೆ ಹೊರಗೆ ಬಂದು, 'ಏನೋ ಹುಚ್ಚು XX ಗಂಡಾ, ಹೀಗೆ ಹೊಡೆದರೆ? ಬುದ್ಧಿಯನ್ನ ಎಲ್ಲಿಟ್ಟಿದ್ದೀ? ತಪ್ಪುಮಾಡಿದರೆ ಸಿಟ್ಟು ಮಾಡಬೇಕು; ಬಾಯಿಂದ ಬೆದರಿಸಬೇಕು! ಹೊಡೆಯುವಾಗ ಎಲ್ಲಾದ್ರೂ ಬಡೀತು, ಏನಾದರೂ ಆಯ್ತು ಅಂದರೆ, ವಿನಾಕಾರಣ ಅಪವಾದಕ್ಕ ನಾನು ಗುರಿ! ನಾ ಒಬ್ಬಾಕಿ ಇದ್ದೀನಿ ಅಂತ ಇವೆಲ್ಲಾ ಬರ್ತಾವ. ಇಬ್ಬರೂ ರಾಜಾ-ರಾಣೀ ಹಾಂಗ ಇದ್ದರ ನೆಟ್ಟಗಾಗತಿತ್ತು. ದೇವರು ಒಯ್ಯವೊಲ್ಲ ನನ್ನ... ಯಾಕಿಟ್ಟಾನೊ ಇನ್ನೂ!'' ಎಂದು ಅವ್ವ ಅಳತೊಡಗಿದಳು. ಕೋಲನ್ನು ಅಲ್ಲಿಯೇ ಒಗೆದು, ನಾನು ಹೊರಗೆ ಬಂದು ಕುಳಿತೆ.

ತಲೆಯಲ್ಲಿ ಯೋಚನೆಯೊಂದು ಸುಳಿಯಿತು:— ಮನೆಯಲ್ಲಿರಬಾರದೆಂದು. ಸದ್ದುಮಾಡದೆ ಕೋಟು ಟೊಪ್ಪಿಗೆ ಹಾಕಿಕೊಂಡು ಹಾಗೆಯೆ ಹೊರಟುಬಿಟ್ಟೆ. ಆಕೆ ಅಳುತ್ತಿರುವ ಧ್ವನಿ ಕೇಳಬರುತ್ತಿತ್ತು. ಅವ್ವ ಏನೇನೋ ಒಟಗುಡುತ್ತ ಚಪಾತಿ ಲಟ್ಟಿಸುತ್ತಿದ್ದಳು.

ನೇರವಾಗಿ ಕಟ್ಟೀ ರಾಮೂನ ಮನೆಗೆ ಬಂದೆ. ಬಾಗಿಲನ್ನು ಮುಂದೆ ಮಾಡಿತ್ತು. ಅವನನ್ನೇನೂ ಕೂಗಲಿಲ್ಲ. ಹಾಗೆಯೆ ಮುಂದೆ ಹೊರಟೆ. ಹಾದಿಯುದ್ದಕ್ಕೂ ತಲೆಯಲ್ಲೆಲ್ಲ ವಿಚಾರವೇ ವಿಚಾರ: ''ನಾನು ಹೆಂಡತಿಯನ್ನು ಹೊಡೆದೆ?..ರುಕ್ಮಿಣಿ ಆಕೆಯ ಗೆಳತಿ; ಪಾಪ, ಕಾಯಿಲೆ ಇದ್ದಳು... ಆಕೆಯ ಗಂಡ ಊರಲ್ಲಿರಲಿಲ್ಲ... ಹೋಗಿದ್ದಾಳು ಪಥ್ಯದ ಅಡಿಗೆ ಮಾಡಲಿಕ್ಕೆ... ಇದರಲ್ಲಿ ತಪ್ಪೇನು? ಅನುವು ಆಪತ್ತುಗಳಲ್ಲಿ ಒಬ್ಬರಿಗೊಬ್ಬರ ನೆರವು ಬೇಕೇಬೇಕು... ತಾಯಿ ಊರಲ್ಲಿಲ್ಲದಾಗ, ತಿಂಗಳಿಗೆ ನಾಲ್ಕು ದಿನ ತಪ್ಪದೆ— ನಾವು ಅವರಲ್ಲಿ ಉಂಡು ಬರಲಿಲ್ಲವೇನು? ಈಗ ಆಕೆಗೆ ಪಥ್ಯ ಮಾಡಿಹಾಕಿದರೆ ಅವ್ವನಿಗೆ ಸಿಟ್ಟು ಬಂತು... ಯಾಕೊ? ಪರರು ನಮಗೆ ಸಹಾಯ ಮಾಡಿದರೆ ಬೇಕು; ನಾವು ಮಾಡುವುದಾದರೆ ಬೇಡ... ತನ್ನನ್ನು ಕೇಳಿ ಹೋಗಲಿಲ್ಲಾ ಎಂದು ಇದೆಲ್ಲ ಸಿಟ್ಟು... ತಾಯಿ ಎಂದು ಅವಳ ಮೇಲೆ ನನ್ನ ಪ್ರೀತಿ. ಆದರೆ ಆಕೆ ಅತ್ತೆಯಾದಾಗ ಮಾತ್ರ ನನ್ನ ತಲೆ ಕಾಯುತ್ತದೆ. ಒಂದೇ ಕರುಳು; ಆದರೆ ಬಣ್ಣ ಎಷ್ಟು? ಮನೆ

ಯಲ್ಲಿರುವವರು ನಾವು ಮೂರು ಜನ. ನಾನು ಹೆಂಡತಿಯನ್ನು ಪ್ರೀತಿಸಬಲ್ಲೆ; ಅಷ್ಟೇ ತಾಯಿಯನ್ನೂ ಪ್ರೀತಿಸಬಲ್ಲೆ. ಆದರೆ ತಾಯಿಯ ರೀತಿ ಹಾಗಿಲ್ಲ. ಇಬ್ಬರ ಮೇಲಿನ ಪ್ರೀತಿ ಎರಡು ವಿಧ! ತಾನು ಮಗನನ್ನು ಪ್ರೀತಿಸಬೇಕು, ಮಗ ತನ್ನನ್ನು ಪ್ರೀತಿಸಬೇಕು. ಸೊಸೆಯೋ—ಆಕೆ ಯಾವಾಗಲೂ ತನಗೆ ಅಂಕಿತಳಾಗಿರಬೇಕು. ಇದರಲ್ಲಿ ಸ್ವಲ್ಪ ವ್ಯತ್ಯಾಸವಾಯಿತೋ, ದೆವ್ವ ಸೇರಿತೇ ಮೈಯಲ್ಲಿ! ಸೊಸೆಯೆಂದರೆ ಅವರ ತಿಳಿವಳಿಕೆ ಏನಿದೆಯೊ!..."

ಹೀಗೆ ಏನೇನೋ ವಿಚಾರತರಂಗಗಳು ತಲೆಯಲ್ಲಿ ಬಂದು ಹೋಗುತ್ತಲಿದ್ದುವು. ಎಲ್ಲಿಗೆ ಹೊರಟಿದ್ದೆನೊ ನನಗೇ ಗೊತ್ತಿದ್ದಿಲ್ಲ. ಅಷ್ಟರಲ್ಲಿಯೆ ಊಟದ ಹೋಟೆಲ್ಲಿನ ಬೋರ್ಡನ್ನು ಕಂಡೆ. ಮನಸ್ಸಿನಲ್ಲಿ ಬಂತು—ಇಲ್ಲಿಯೇ ಊಟ ಮಾಡಬೇಕೆಂದು. ಒಳಗೆ ಹೋದೆ. ಎಲೆ ಬಡಿಸಿದ್ದಿತು. ಊಟಕ್ಕೆ ಕುಳಿತೆ. ಒಬ್ಬ ಗುರುತಿನವರು ಕೇಳಿದರು:

"ಇದೇನು, ಇಲ್ಲಿಯು ಊಟ ಯಾಕೆ ಬಂತು ನಿಮ್ಮ ಪಾಲಿಗೆ?"

"change (ಚೇಂಜ್) ಅಂತ ಬಂದಿದ್ದೇನೆ!"

"ಅಂತೂ ಮನೆಯ ಊಟ ಕೂಡಾ ಒಮ್ಮೊಮ್ಮೆ ಬೇಸರ ಬರ್ತದೆ ಅನ್ರಿ!"

"ಒಮ್ಮೊಮ್ಮೆ ಎಲ್ಲದರದೂ ಬೇಸರ ಬರ್ತದೆ! ಮನೆಯ ಊಟವಷ್ಟೇ ಯಾಕೆ. ಮಾಡಿಕೊಂಡ ಹೆಂಡತಿ, ಹಡೆದ ತಾಯಿ, ಹುಟ್ಟಿ ಬೆಳೆದ ಮನೆ—ಯಾವುದೂ ಬೇಡವೆನಿಸುತ್ತದೆ!"

"ತಾಯಿಯ ವಿಷಯ ನಾವು ಒಪ್ಪಬಹುದು. ಆದರೆ ಹೆಂಡತಿ ಅದರಲ್ಲಿಯೂ ಹೊಸ ಹೆಂಡತಿ ಬೇಸರಾಗುವದನ್ನು ನಾನೆಲ್ಲಿಯೂ ಕೇಳಿಲ್ಲ!"

"ನನ್ನ ಅನುಭವ ನಾನು ಹೇಳಿದೆ! ಅದಿರಲಿ, ಈವೊತ್ತೇನು ಯುದ್ಧದ ಸುದ್ದಿ?"

ನಡೆದಿದ್ದ ವಿಷಯ ಮುಂದೆ ಸಾಗಿಸುವ ಮನಸ್ಸಿರಲಿಲ್ಲ; ಯುದ್ಧದ ವಿಷಯವನ್ನು ತೆಗೆದೆ. ಊಟದ ಕಡೆಗೆ ಲಕ್ಷ್ಯವೇ ಇರಲಿಲ್ಲ. ಹಾಗೂ ಹೀಗೂ ನಾಲ್ಕು ತುತ್ತು ಹೊಟ್ಟೆಯಲ್ಲಿ ಹಾಕಿದೆ. ಹೊರಗೆ ಬಂದು ಬಾಕಿನ ಮೇಲೆ ಕುಳಿತು ಪೇಪರನ್ನು ಓದಿದೆ. ಎಲ್ಲ ಮುಗಿಯಿತು. ಎದ್ದವನೇ ಸುತ್ತೆ ರಾಮೂನ ಮನೆಗೆ ಬಂದೆ. ಬಾಗಿಲು ಇಕ್ಕಿತ್ತು. ಕೂಗಿದೆ; ಎದ್ದು ಬಂದು ರಾಮು ಬಾಗಿಲನ್ನು ತೆರೆದ. ಆತನಿಗೆ ಆಶ್ಚರ್ಯವಾಯಿತು; ಕೇಳಿದ:—

"ಏನೋ ಈಗ ಬಂದೆ? ಬಾ ಊಟ?"

"ಎಲ್ಲ ಮುಗಿದಿದೆ. ಮನೆಯಲ್ಲಿ ಬೇಜಾರು ಬಂತು, ಬಂದೆ!"

"ದಿನಾಲು ಬರುವದಿಲ್ಲ; ಇಂದೇ ಯಾಕೆ ಬಂತಪ್ಪಾ?"

"ಕಾರಣ ಗೀರಣ ಕೇಳಬೇಡ. ಅದನ್ನು ಮತ್ತೆಂದಾದರೂ ಹೇಳುವೆ ನಂತೆ. ಈಗ ಬೇರೆ ಏನಾದರೂ ಹರಟೆ ಹೊಡೆಯೋಣ!"

"ಹೋಗಲಿ ಬಿಡು, ವಿಶೇಷವೇನೂ ಇಲ್ಲ, ಹೌದಲ್ಲೊ?"

"ಇಲ್ಲ; ಇಂದು ಶಾಲೆಯಲ್ಲಿ ಇನ್‌ಸ್ಪೆಕ್ಶನ್ ಇತ್ತು— ನನ್ನ ಬಗ್ಗೆ ಇನ್‌ಸ್ಪೆಕ್ಟರರ ರಿಮಾರ್ಕ್ಸು ನೆಟ್ಟಗಿಲ್ಲ!"

"ಇಷ್ಟೇನೇ? ಅದಕ್ಕ ಇಷ್ಟ್ಯಾಂದ್ಯಾಕ ಮನಸಿಗೆ ಹಚ್ಚಿಕೊಂಡೀದಿ! ಬಹಳಾದರೆ ನವಕರಿಗೆ ಬ್ಯಾಡಂದಾರು! ಅಂದಾಗ ವಿಚಾರ ಮಾಡಿ ಯಂತ!"

ಅಂದು ರಾಮೂನಿಗೆ ಇನ್‌ಸ್ಪೆಕ್ಶನ್ ವಿಷಯವನ್ನಷ್ಟೆ ಹೇಳಿದೆ ಉಳಿದ ಮಾತುಗಳನ್ನು ಹೇಳಲಿಲ್ಲ. ಬೇರೆ ಬೇರೆ ವಿಷಯ ಮಾತಾಡುತ್ತಾ ಇರುವಾಗಲೆ ಜಂಪು ಹತ್ತಿತು. ಅಂದು ಮಧ್ಯಾಹ್ನ ರಜೆ ಇತ್ತು. ಆದೊಂದ ಚಿಂತೆ ಇರಲಿಲ್ಲ. ರಾಮು ಚಹಮಾಡಿ ನನ್ನನ್ನೆಬ್ಬಿಸಿದ. ಇಬ್ಬರೂ ಜೊ ಗೂಡಿ ಚಹ ಕುಡಿದೆವು. 'ಕ್ಲಬ್ಬಿಗೆ ಹೋಗೋಣ' ಎಂದು ರಾಮು ನುಡಿದ ನನಗೆ ಅದು ಬೇಕಾಗಿರಲಿಲ್ಲ. 'ಹಾಗಾದರೆ ಸಿನೆಮಾಕ್ಕೆ ಹೋಗೋಣ ಎಂದು ಇನ್ನೊಂದು ಹಾದಿಯನ್ನು ಸೂಚಿಸಿದ. ಒಪ್ಪಿದೆ. ಇಬ್ಬರು ಹೋದೆವು. ಚಿತ್ರ ನಡೆದಾಗ ಹಲವು ಸಲ ನನಗೆ ಮನೆಯ ನೆನಪಾಯಿತು 'ತಾಯಿ ಏನು ಮಾಡುತ್ತಿರಬಹುದು? ಹೆಂಡತಿ ಉಂಡಿರಬಹುದೊ ಅಥವ ಹಾಗೇ ಅಳುತ್ತ ಕುಳಿತಿರಬಹುದೊ?' ಇತ್ಯಾದಿ. ಆದರೆ ಬಹಳ ಹೊತ್ತು ಈ ವಿಚಾರವನ್ನು ತಲೆಯಲ್ಲಿ ಇಟ್ಟುಕೊಳ್ಳುತ್ತಿರಲಿಲ್ಲ. ಸಿನೆಮಾ ಮುಗಿ ಮೇಲೆ, ರಾಮೂನ ಜತೆಗೆ ಅವನ ಮನೆಗೆ ಹೋಗಿ ಅಲ್ಲಿಯೇ ಉಂಡು ಮ ಗಬೇಕೆಂದೆನಿಸಿತು; ಆದರೆ ಅದು ಸರಿದೋರಲಿಲ್ಲ. ಮನೆಗೆ ಬಂದೆ ಬಾಗಿಲು ಮುಚ್ಚಿತ್ತು. ಸಂದಿಯೊಳಗಿಂದ ನೋಡಿದೆ, ದೀಪ ಕಾಣುತ್ತಿತ್ತು ಯಾರ ಸುಳಿವೂ ಇರಲಿಲ್ಲ. ಸ್ವಲ್ಪ ಹೊತ್ತು ಹಾಗೆಯೆ ನಿಂತೆ. ಐ ನಿಮಿಷವಾಯ್ತು. ಕೊನೆಗೊಮ್ಮೆ 'ಅವ್ವಾ' ಎಂದು ಕೂಗಿದೆ. ಅ

"ಯಾರವರು?" ಎಂದು ಕೇಳಿದಳು.

'ನಾನು' ಎಂದೆ.

ಬಾಗಿಲು ತೆರೆಯಿತು. ಅವಳ ಮೋರೆ ನೋಡಿದೆ; ಅತ್ತು ಅತ್ತು ಕಣ್ಣು ಮೂಗು ಕೆಂಪಗೆ ಆಗಿದ್ದವು. ಮಾತನೇನೂ ಆಡದೆ ಒಳಗೆ ಹೋಗಿ ಬಿಟ್ಟಳು. ಮೈಮೇಲಿನ ಬಟ್ಟೆ ತೆಗೆಯುತ್ತಿರುವಾಗಲೆ ಕೇಳಿದೆ:
ತಾಯಿ ಎಲ್ಲಿ?"

'ನನಗೆ ಗೊತ್ತಿಲ್ಲ; ನೀವು ಹೋದ ಮೇಲೆ ತುಸು ಹೊತ್ತಿಗೆ ಅವರೂ ಹೋದರು. ಇದುವರೆಗೂ ಬಂದಿಲ್ಲ." ಒಳಗಿಂದ ಉತ್ತರ ಬಂದಿತು.

ಐದು ನಿಮಿಷ ಹಾಗೆಯೆ ಕುಳಿತೆ. ವಿಚಾರ ಬಂತು: 'ತಾಯಿ ಎಲ್ಲಿ ಹೋಗಿದ್ದರೂ ಕರೆದುಕೊಂಡು ಬರಬೇಕು' ಎಂದು. ಹಾಗೆಯೆ ಎದ್ದೆ; ಹೊರಟು ಬಿಟ್ಟೆ. ಹೆಂಡತಿ ಏನೋ ಅಂದ ಹಾಗಾಯ್ತು. ಅದು ನನಗೆ ಸ್ಪಷ್ಟಗೆ ಕೇಳಬರಲಿಲ್ಲ.

* * * *

ಊರಲ್ಲಿ ನಮಗೆ ಆಪ್ತರ ಮನೆ ಎಂದರೆ ಒಂದೇ, ಶ್ಯಾಮಣ್ಣನಾಯಕರದು. ಅವರ ಮನೆಗೂ ನಮ್ಮ ಮನೆಗೂ ಒಂದುವರೆ ಮೈಲು ದೂರ. ರಾತ್ರಿ ಸುಮಾರು ಹತ್ತುಗಂಟೆ ಆಗಿತ್ತು. ಇಪ್ಪತ್ತು ನಿಮಿಷದಲ್ಲಿ ಅವರ ಮನೆಗೆ ಬಂದೆ. ಎಲ್ಲರೂ ಊಟಕ್ಕೆ ಕುಳಿತಿದ್ದರು. ನನ್ನ ವಿಷಯವಾಗಿಯೆ ಮಾತು ನಡೆದಿತ್ತು. ನೇರವಾಗಿ ಭೋಜನ ಶಾಲೆಗೆ ಹೋದೆ. "ಸೇತೂ ಬಂದೇ ಬಿಟ್ಟನಲ್ಲ!" ಎಂದು ಶ್ಯಾಮಣ್ಣನವರ ಹೆಂಡತಿ ಎಂದರು. ಎಲ್ಲರೂ ನನ್ನ ಕಡೆಗೆ ನೋಡಿದರು. "ಒಂದು ಮಣೆ ಕೊಡು ಅವನಿಗೆ" ಎಂದು ಶ್ಯಾಮಣ್ಣನವರು ಹೆಂಡತಿಗೆ ಹೇಳಿದರು. ಮಣೆ ಹಾಕಿದರು, ಕುಳಿತೆ.

"ಅಲ್ಲೋ ಸೇತೂ, ಏನಪಾ ಇದು.... ನೀನು ಹೀಗೆ ಮಾಡ್ತಾ ಇರೋದು? ತಾಯಿಂದಿರು ಮಕ್ಕಳನ್ನ ಬೇಡೋದ್ಯಾತಕ್ಕ? ಮುಪ್ಪಿನ ಕಾಲಕ್ಕ ನೋಡಬೇಕೂ ಅಂತಲ್ಲs? ಹೆಂತೀ ಮ್ಯಾಲೆ ಪ್ರೀತಿ ಮಾಡು; ಆದರ ತಾಯಿನ್ನ ಮರೀಬ್ಯಾಡ... ತಿಳೀತೇನು? ಆಕೆಯದು ಮುಪ್ಪಿನ ಕಾಲ, ಬಹಳಾದರ ಇನ್ನು ನಾಕಾರು ವರ್ಷ ಇದ್ದಾಳು! ಮೇಲಿನವರ ಕರೆ ಬಂದರೆ ಅದಕ್ಕೇನೂ ತಡಹಿಡಿಯುವದಿಲ್ಲ... ... !"

ಮಾವಾ," ನಾನು ನಡುನೇ ಹೇಳಿದೆ. ನನ್ನ ಸ್ವಭಾವ ನಿಮಗ ಗೊತ್ತದ! ನಾವು ಮೂರೂ ಜನ ಅನ್ಯೋನ್ಯವಾಗಿರಬೇಕು; ಯಾರೂ ಯಾರಮೇಲೂ ಅಧಿಕಾರ ನಡೆಯಿಸಬಾರದು. ಅವ್ವ ಹ್ಯಾಗೆ ನಮ್ಮ ಮನೆಗೆ ಬಂದಿದ್ದಾಳೋ, ಹಾಗೇ ಹೆಂಡತಿಯೂ ಬಂದಿದ್ದಾಳೆ. ಅಧಿಕಾರದ ಪ್ರಶ್ನೆ ಬಂದರೆ ಎಲ್ಲರೂ ಅಷ್ಟೆ!" ನಾನು ಮೆಲ್ಲಗೆ ಹೇಳಿದೆ.

ಅವ್ವನಿಗೆ ನನ್ನ ಮಾತು ಸೇರಿಕೆ ಬರಲಿಲ್ಲ. ಆಕೆಗೆ ಏನೋ ಎನಿಸಿತು. "ಶಾಮಾ, ಯಾಕಪ್ಪಾ ಇದೆಲ್ಲಾ ರಗಳಿ! ನನ್ನ ಹಣೇಬಾರದಲ್ಲಿ ಮಗನ ಸುಖಾ ಬರೆದಿಲ್ಲ. ಅದಕ್ಕೂ ಪುಣ್ಯಾ ಮಾಡಿ ಬಂದಿರಬೇಕು. ಇಲ್ಲದ್ದನ್ನು ಬೇಡಿದರ ಹ್ಯಾಂಗ ಬಂದೀತು? ಹೇಣ್ತಿ ಬರೋತನಕಾ ತಾಯಿ ಬೇಕಾ ಗಿತ್ತು. ಈಗ ಹೆಣ್ತಿ ಬಂದ್ಲು, ನವಕರಿ ಸಿಕ್ಕಿತು; ತಾಯಿ ಈಗ ಬೇಕ್ಯಾತಕ್ಕ ನೋಡು! ನಾ ಇದ್ದವರ ಮನಸ್ಸಿಗೆ ಬಂದ್ಹಾಂಗ ಇರಲಿಕ್ಕೆ ಬರೂದಿಲ್ಲ! ಈಗ ಆರು ತಿಂಗಳಾಯ್ತು. ಒಂದು ದಿನ ಏನೂ ಗಳಿಗಿಹೊತ್ತು ಕೂತು, ಸಂತೋಷದಿಂದ ನನ್ನ ಜೊತೀಗೆ ಇಂವ ಮಾತಾಡಿಲ್ಲ. ನಾ ಇಲ್ಲದಾಗ ಹೆಣ್ತೀ ಜೊಡಿ ಕುಚುಕುಚು ಹಾಂಗs ಹಚ್ಚಿರತಾನ! ನಾ ಇದ್ದೆನಂದರ ಇಬ್ಬರಬಾಯಿಗೂ ಬೀಗ ಬೀಳ್ತಾವ! ನಾ ಏನಪ್ಪಾ ಇಂಥಾ ತಪ್ಪು ಮಾಡಿ ರೋದು? ಇವತ್ತು ಹೆಣ್ತೀನ್ನ ಹೊಡೆದ. ಯಾಕ?... ಅವಳ ತಪ್ಪೂ ಅಂತಲ್ಲ; ನನ್ನ ಮ್ಯಾಲಿನ ಸಿಟ್ಟು ಅದಕ್ಕ ಕಾರಣ!,,

"ಸುಮಕ್ಕಾ, ಸೇತೂ ಏನೂ ಅವಿವೇಕಿ ಅಲ್ಲ. ತಿಳಿದಂವ ಇದ್ದಾನ; ಹೊಸತಾಗಿ ಹೇಣ್ತಿ ಮನೀಗೆ ಬಂದ್ಲೂ ಅಂದರ ಸ್ವಲ್ಪ ತಪ್ಪು ಆಗೂದು ಸ್ವಾಭಾವಿಕ; ಹಿರೇರು ಸಹನ ಮಾಡಬೇಕು. ಈಗಿನ ಹುಡು ಗರ ಮನಸ್ಸುಒಂದು ರೀತಿ. ಹೇಣ್ತಿಮ್ಯಾಲೆ ತಮ್ಮ ಹೊರತು ಬೇರೆ ಯಾರೂ ಅಧಿಕಾರ ನಡಿಸಬಾರದೂ ಅಂತ ಇವರಿಗೆ ಅನಿಸ್ತಾ ಇರ್ತsದ. ತಾವು ಹೆಣ್ತೀನ್ನ ಬೇಕಾದ್ಹಾಂಗ ನಡೆಸಿಕೊಳ್ಳಬಹುದು; ಆದರ ಹಿರೇರು ಇವರ ಹೆಂಡಂದಿರಿಗೆ ಒಂದು ಮಾತಾಡಿದರ ಇವರ ಪಿತ್ತ ತಲೀಗೇರ್ತsದ! ನಾವು ಗಂಡಸರು ಇದನ್ನ ತಿಳಕೊಂಡು, ಬೇಕಾದ ಬದಲಾವಣೀ ಮಾಡಿ ಕೋತೀವಿ! ನಿಮಗೆ ತಿಳೀಬೇಕಾದರ ತಡಾ ಹಿಡೀತದ! ಸುಮಕ್ಕಾ, ನಾನು ಒಂದು ಮುಖ್ಯ ಮಾತು ಹೇಳ್ತಿನಿ: ಮಗಾ ಪ್ರಾಯಕ್ಕ ಬಂದಾ ಅಂದರ

ತಂದೀ ಧಿಕಾರ ಹೋಯ್ತು; ಮನೀಗೆ ಸೊಸೀ ಬಂದ್ಲೂ ಅಂದರ ತಾಯಿಯ ಅಧಿಕಾರ ಹೋಯ್ತು !

"ನನಗ್ಯಾಕ ಇವೆಲ್ಲಾ ಅಧಿಕಾರಾ-ಪಧಿಕಾರಾ ! ನಮಗವು ತಿಳಿಯೋದೂ ಇಲ್ಲ, ಅದರ ಹಾಂಗ ನಡಿಯೋದೂ ನಮ್ಮಿಂದ ಆಗೋದಿಲ್ಲ. ಎಲ್ಲ್ಯಾದರೂ ಒಂದು ತೀರ್ಥಕ್ಷೇತ್ರ ನೋಡಿ ಕಳಿಸಿ ಬಿಡು ! ರಾಮಾ ಕೃಷ್ಣಾ ಅಂತ ಕಾಲಾ ಕಳೀತಿನಿ ! ಯಾಕಪ್ಪಾ, ಇದೆಲ್ಲಾ ನನಗ ? ನಾನಂತೂ ಇನ್ನೇನು ಮನಿಗೆ ಹೋಗೋ ಆಕಿ ಅಲ್ಲ ! , ಅವ್ವ ನಿಶ್ಚಯದ ದನಿಯಲ್ಲಿ ಅಂದಳು.

"ಸುಮಕ್ಕಾ, ಇವೆಲ್ಲ ಆಗೋ ಮಾತಲ್ಲ—ಹೋಗೋ ಮಾತಲ್ಲ ! ಏ ಸೇತೂ, ಕರಿಯೋ ಅವ್ವನ್ನ—ಮನೀಗೆ ಬಾ ಅಂತ" ಶ್ಯಾಮಣ್ಣನವರ ಹಿರೇಮಗ ರಾಮಣ್ಣ ಅಂದ.

'ನಾನು ಅದಕ್ಕಾಗಿಯೇ ಈಗ ಬಂದಿರೋದು. ನೋಡು ಮಾವಾ, ನನಗ ಅವ್ವನ ಮೇಲೆ ಸಿಟ್ಟಿಲ್ಲ. ಅವ್ವ ಹಾಂಗ ತಿಳ್ಕೊಂಡಾಳ....ಅದಕ್ಕ ನಾ ಏನು ಮಾಡಲಿ? ನಾವು ಗಂಡಾಹೇಣ್ತೀ ಹ್ಯಾಂಗs ಇದ್ದರೂ, ಅವ್ವ ಅದರಲ್ಲಿ ಸಂತೋಷಪಡಬೇಕು. ತಪ್ಪಿದ್ದರ ನಾ ಅದನ್ನ ತಿದ್ದಿಕೋತೀನಿ. ತಿದ್ದಿಕೊಳ್ಳದಿದ್ದರ ಅನುಭವಿಸ್ತೀನಿ. ಆದರೆ ಮಾತು ಮಾತಿಗೂ 'ಹಾಂಗ್ಯಾಕ ಮಾಡಿದಿ, ಹೀಂಗ್ಯಾಕ ಮಾಡಿದಿ?' ಅಂತ ಪ್ರಾರಂಭಾದರ ಎಂಥವರಿಗೂ ತಲೆ ಶಾಂತವಾಗಿ ಉಳಿಯುವುದಿಲ್ಲ. ಹೆಣ್ತಿನ್ನ ಮೇಲು ಕಟ್ಟಿ ನಾನು ಮಾತಾಡುವದಿಲ್ಲ. ಆಕೆ ತಪ್ಪು ಮಾಡಿದರೆ ನಾನಿದ್ದೀನಿ ತಿದ್ದಲಿಕ್ಕೆ ! ಹೆಣ್ತೀನ್ನ ತಿದ್ದಲಿಕ್ಕೆ ಗಂಡನೇ ಸಮರ್ಥ; ಅವನಿಂದ ಸಾಧ್ಯವಾಗದಿದ್ದರೆ ಯಾರಿಂದಲೂ ಸಾಧ್ಯ ಆಗೂ ಹಾಂಗಿಲ್ಲ! '

"ಅಂತೂ ಮದುವೆ ಆದ ಆರು ತಿಂಗಳಲ್ಲಿ ಬಹಳ ಅನುಭವ ಬಂದsದಪಾ ನಿನಗ–ಸೇತೂ ! ಅದಿರಲಿ, ಊಟಾ ಮಾಡಿ ಬಂದಿಯೋ ಏನು ಹಾಂಗs ಬಂದೀಯೊ ?"

"ಊಟ ಆಗಿಲ್ಲ; ಅದರ ಹಸಿವಿಯೂ ಇಲ್ಲ!,

"ಇರಲಿ ಬಾ, ಒಂದು ತುತ್ತು ಉಣ್ಣು ! ಅಲ್ಲೇ ಕೂಡು. ರಾಧಕ್ಕಾ, ಎಲಿ ಬಡಿಸು !" ರಾಮಣ್ಣ ತಾಯಿಗೆ ಹೇಳಿದ.

ನಾನು ಒಲ್ಲೆನೆಂದರೂ ಕೇಳಲಿಲ್ಲ. ಎಲೆ ಬಂದೇ ಬಿಟ್ಟಿತು.
''ಸುಮಕ್ಕಾ, ಸೇತೂ ಕರೀಲಿಕ್ಕೆ ಬಂದಾನ. ಈಗ ನೀನು ಹೋಗು.
ನಾನೆಲ್ಲ ಅವನ್ನ ಆ ಮ್ಯಾಲೆ ಕರೆದು ಬುದ್ಧಿ ಹೇಳ್ತೇನಿ!'' ರಾಮಣ್ಣ
ಅಂದರು.

'ಈಗ ನಾ ಏನೂ ಹೋಗೋವಾಕಿ ಅಲ್ಲ. ದಿನಾ ಬೆಳಗು ಇವರು
ಮಾಡೋವನ್ನೆಲ್ಲಾ ನನ್ನಿಂದ ನೋಡೋದು ಆಗೋದಿಲ್ಲ! ಮತ್ತೆ ನಾನು
ಮನಿಯೊಳಗಿರೋದು ಇಂವಗೂ ಬ್ಯಾಡ; ಆಕೀಗಂತೂ ಮೊದಲು
ಬ್ಯಾಡ!' ತಾಯಿ ನುಡಿದಳು.

'ಸೇತೂ, ಸುಮಕ್ಕ ನಾಳೆ ಬರ್ತಾಳ. ಹೇಣ್ತಿ ಮನೆಯಲ್ಲಿ
ಒಬ್ಬಾಕೇ....... ಪಾಪ! ನೀನು ಈಗ ಹೋಗು!' ಶಾಮಣ್ಣ ಅಂದರು.

'ಅವ್ವನನ್ನು ಬಿಟ್ಟು ನಾನು ಹೋಗುವವನೇ ಅಲ್ಲ' ನಾನೆಂದೆ.

'ಇರಲಿ ಹೋಗೋ, ನೀನೂ ದೊಡ್ಡ ಮಾತೃಭಕ್ತ! ನಾಳೆ ನಾವೆ
ಲ್ಲಾರೂ ಸುಮಕ್ಕನ್ನ ಕರಕೊಂಡು ನಿಮ್ಮ ಮನೀಗೇ ಬರ್ತೇವೆ ಹೋಗು!
ಎಲ್ಲರ ಊಟ ಅಲ್ಲೇ ನಾಳೆ! ಹೆಂಡತಿಯ ಕಡೆಯಿಂದ ಅಡಿಗೀ ಮಾಡಿಸಿಡು!
ಈವೊತ್ತಿನ ನಿನ್ನ ಅಪರಾಧಕ್ಕ ಇದು ತಪ್ಪುದಂಡ!' ರಾಮಣ್ಣ ಚೇಷ್ಟೆಯ
ದನಿಯಲ್ಲಿ ನುಡಿದ.

'ಹೌದು, ಹಾಗೇ ಮಾಡೋದು' ಎಂದು ಎಲ್ಲರ ಬಾಯಿಂದ
ಒಮ್ಮೆಲೆ ಮಾತು ಬಂದು ಬಿಟ್ಟಿತು. ಸರಿ, ನನ್ನ ಆಗ್ರಹ ನಡೆಯುವಂತಿ
ರಲಿಲ್ಲ

'ನಾಳೆ ಅವ್ವನನ್ನು ಕರೆದುಕೊಂಡು ನೀವೆಲ್ಲರೂ ಬರಲೇಬೇಕು!'
ಎಂದು ಹೇಳಿ ಹೊರಟುಬಿಟ್ಟೆ.

* * * *

ಮನೆಗೆ ಬಂದೆ, ಹೆಂಡತಿ ಒಂದೇ ಕೂಗಿಗೆ ಬಾಗಿಲನ್ನು ತೆರೆದಳು.
ಕೋಣೆಯಲ್ಲಿ ಹೋದವನೇ ಬಟ್ಟೆ ತೆಗೆದು, ಬಾಗಿಲನ್ನು ಮುಂದೆ ಮಾಡಿ,
ದೀಪ ತೆಗೆದು ಮಲಗಿಕೊಂಡೆ. ಆಕೆ ಇದನ್ನೆಲ್ಲ ನೋಡುತ್ತ ಒಂದು ಕಡೆಗೆ
ನಿಂತಿದ್ದಳು. ನನ್ನನ್ನು ಮಾತಾಡಿಸುವ ಧೈರ್ಯವಾಗಲಿಲ್ಲ; ನಾನೂ ಅವ

ಳನ್ನು ಕರೆಯಲಿಲ್ಲ, ಮಾತನಾಡಿಸಲಿಲ್ಲ. ಕೋಣೆಯ ಬಾಗಿಲಿಗೆ ಕೊಂಡಿಯನ್ನು ಮಾತ್ರ ಹಾಕಲಿಲ್ಲ. 'ಬಂದರೆ ತಾನಾಗಿಯೇ ಬರಲಿ! ಏನು ಮಾಡುತ್ತಾಳೊ ನೋಡೋಣ' ಎಂದು. ಆಕೆ ತಲೆಬಾಗಿಲನ್ನು ಇಕ್ಕಿದಳು. ಅವಳ ಹಾಸಿಗೆ ನನ್ನ ಕೋಣೆಯಲ್ಲಿಯೇ ಇತ್ತು. ಹಾಗೆಯೆ ಹೊರಗೆ ಕುಳಿತು ಬಿಟ್ಟಿರಬೇಕು. ದೀಪ ಮಾತ್ರ ಉರಿಯುತ್ತಿತ್ತು. ನಾನು ಅರ್ಧ ಗಂಟೆಯವರೆಗೂ ಹೊರಳಾಡುತ್ತಾ ಇದ್ದೆ. ನಿದ್ದೆ ಬರಲೊಲ್ಲದು. ಅವಳೂ ಒಳಗೆ ಬರುವ ಲಕ್ಷಣ ಕಾಣಲಿಲ್ಲ. 'ನನಗೆ ನಿದ್ದೆಹತ್ತಿದ ಮೇಲೆ ಬರಬೇಕೆಂದು ಕಾದಿರಬಹುದು' ಎನಿಸಿತು. 'ಒಮ್ಮೆ ಗೊರಿಕೆ ಹಾಕಿಯಾದರೂ ನೋಡೋಣ' ಎಂದು ವಿಚಾರ ಬಂತು ಮನಸ್ಸಿನಲ್ಲಿ. ಘೊರ್ ಘೊರ್ರೆಂದು ಅವಳಿಗೆ ಕೇಳಬರುವ ಹಾಗೆ ಪ್ರಾರಂಭ ಮಾಡಿದೆ. ಈ ನನ್ನ ಪ್ರಾರ್ಥನೆಗೆ ಅವಳ ಹೃದಯ ಕರಗಿದಂತೆ ಕಾಣಿಸಿತು. ಮೆಲ್ಲಗೆ ಬಾಗಿಲು ತೆರೆಯಿತು. ನಾನು ಬಾಗಿಲ ಕಡೆಗೆ ಬೆನ್ನು ಮಾಡಿ ಮಲಗಿದ್ದೆ; ಆಕೆ ಬರುವುದನ್ನು ಕಿವಿಯಿಂದಲೆ ಕಂಡುಕೊಂಡೆ. ತೀರ ಹತ್ತಿರ ಬಂದಳು. ಹಾಸಿಗೆಯ ಮೇಲೆ ಕಾಲಿಟ್ಟಳು. ಹಾಗೆಯೆ ಮೆಲ್ಲಗೆ—ನನಗೆ ತಿಳಿಯದ ಹಾಗೆ—ಮಲಗಿಕೊಂಡಳು. ಅವಳ ಉಸಿರಿನ ವೇಗ ಹೆಚ್ಚಾಯಿತು. ನಾನು ಗೊರಕೆಯನ್ನು ಜೋರು ಮಾಡಿದೆ. ಆಕೆ ಒಂದು ಗಳಿಗೆ ಹಾಗೆಯೆ ಮಲಗಿದ್ದು, ಮುಂದೆ ಮೆಲ್ಲಗೆ ನನ್ನ ಹತ್ತಿರ ಸರಿಯುತ್ತಾ ಬಂದಳು. ನನ್ನ ಬೆನ್ನಿಗೆ ಅವಳ ಮೈ ಅಂಟಿಕೊಂಡಿತು. ಉಸಿರಿನ ಜೊತೆಗೆ ಅಳುವ ಒಳದನಿಯೊಂದು ಹೊರಚಿಮ್ಮಿ ಬರುತ್ತಿತ್ತು. ಮಗ್ಗುಲನ್ನು ಬದಲಿಸಿ ಹೊರಳಿ ಮಲಗಿದೆ. ಕೈ ಆಕೆಯ ಮುಖದ ಮೇಲೆ ಹೋಯಿತು. ಕೆನ್ನೆಗಳ ತುಂಬ ಕಣ್ಣೀರು! ಒಮ್ಮೆಲೆ ಸೆರಗಿನಿಂದ ಕಣ್ಣುಗಳನ್ನೊರಸಿದೆ. "ನಾನು ವಿನಾಕಾರಣ ಹೊಡೆದೆ" ಎಂಬ ಮಾತು ನನ್ನ ಬಾಯಿಂದ ತಾನಾಗಿ ಹೊರಕ್ಕೆ ಬಂದಿತು. ಅವಳ ದುಃಖದ ಕಟ್ಟು ಒಡೆದು ಅಶ್ರುಗಳು ಹಳ್ಳವಾಗಿ ಹರಿಯತೊಡಗಿದುವು. "ಅತ್ತೆಯವರು ಬರಲಿಲ್ಲವೆ?" ಎಂದು ಕೇಳಿದಳು. 'ನಾಳೆ ಬರುತ್ತಾಳೆ' ಎಂದೆ. ವಿಚಾರದ ಚಕ್ರಕ್ಕೆ ಮತ್ತೆ ಕೀಲಿಯನ್ನು ಕೊಟ್ಟಂತಾಯ್ತು. ಬೆಳಗಿನ ಸಂಗತಿಗಳೆಲ್ಲ ಒಂದೊಂದೇ ನೆನಪಿಗೆ ಬರತೊಡಗಿದುವು: ಚಹ ಕುಡಿಯದೆ ಶಾಲೆಗೆ ಹೋದೆ; ತಲೆಶೂಲಿ ಪ್ರಾರಂಭ

ವಾಯಿತು. ಇನ್ಸ್ಪೆಕ್ಶನ್ ಸರಿಯಾಗಿ ಆಗಲಿಲ್ಲ. ಮನೆಗೆ ಬಂದೆ. ಅತ್ತೆ ಸೊಸೆಯರ ಕಿಕ್ಕಟ! ತಾಯಿಯನ್ನು ಸಮಾಧಾನ ಪಡಿಸಬೇಕು; ಅದಕ್ಕೆ ಹೆಂಡತಿಯನ್ನು ಬಾಸಳು ಬರುವ ಹಾಗೆ ಹೊಡೆದಾಯಿತು. ನಾನು ಉಂಡೆ, ಚಹ ಕುಡಿದೆ, ಸಿನೇಮಾ ನೋಡಿದೆ. ಅವ್ವನೂ ಮಾವನ ಮನೆಯಲ್ಲಿ ಉಂಡಳು, ತಿಂದಳು. ಹೆಂಡತಿಗೆ ಮಾತ್ರ ಮುಂಜಾವಿನಿಂದ ಊಟವಿಲ್ಲ....ತಪ್ಪು ನನ್ನದು; ಕೆಲಮಟ್ಟಿಗೆ ತಾಯಿಯದು! ಆದರೆ ಅದನ್ನು ಅನುಭವಿಸುವಾಕೆ ಹೆಂಡತಿ. ಇಷ್ಟಾದರೂ ಎಲ್ಲ ಅಪರಾಧ ತನ್ನದೇ ಎನ್ನುವ ಹಾಗೆ ನನ್ನನ್ನು ಮೊರೆಯಿಟ್ಟಳು ...ಇದೇನು ನಮ್ಮ ಹೆಂಗುಸರ ಸ್ವಭಾವವೊ, ಪ್ರೇಮದ ಲಕ್ಷಣವೊ ಅಥವಾ ಅವರ ಅಸಹಾಯಸ್ಥಿತಿಯ ಚಿಹ್ನವೊ? ಯಾವದೂ ನನಗೆ ಅರ್ಥವಾಗಲಿಲ್ಲ, ಒಡೆಯದ ಒಗಟ!''

ಈ ವಿಚಾರ ಬರುತ್ತಿರುವಾಗಲೆ ನಿದ್ದೆ ಹತ್ತಿತು. ಮುಂಜಾನೆ ಚಹ ಮಾಡಿಕೊಂಡು ಹೆಂಡತಿ ಗದ್ದ ಹಿಡಿದು ನನ್ನನ್ನೆಬ್ಬಿಸಿದಳು "ನನ್ನ ಜೊತೆಗೆ ನೀನೂ ಕುಡಿಯಬೇಕು.' ಎಂದೆ. ''ನಾನು ಆ ಮೇಲೆ ಕುಡಿಯುತ್ತೇನೆ" ಎಂದಳು, "ಛೆ, ಅದಾಗದು; ಇದರಲ್ಲಿಯೇ ಇಬ್ಬರೂ ಕುಡಿಯೋಣ" ಎಂದೆ. ನನಗೆ ಕೊಡಲು ಅವಳು ಚಹದ ಕಪ್ಪು ಮುಂದೆ ಮಾಡುವಾಗ, ಅವಳ ಒಂದು ತಟಕು ಕಣ್ಣೀರು ಅದರಲ್ಲಿ ಬಿದ್ದು ಬಿಟ್ಟಿತು. ಉತ್ಕಟ ಭಾವನೆಯು ನನ್ನನ್ನಾವರಿಸಿಕೊಂಡಿತ್ತು. 'ಬೇರೆ ತಾ' ಎಂದು ಹೇಳುವ ಮೊದಲು, ಅದನ್ನೇ ಅರ್ಧ ಕುಡಿದು ತೀರಿಸಿ ಬಿಟ್ಟಿದ್ದೆ.

---

# ಕಣ್ಮರೆಯಾದ ಬಂದೂಕು.

'ರಾಮುಜಿ, ಮೂರು ಗಂಟೆಗೆ ನಿಮ್ಮ ಪಹಾರಾ, ಲಕ್ಷ್ಯದಲ್ಲಿರಲಿ ! ನಿಮಗೇನು ಹೆಂಡತಿಯಿದ್ದಾಳೆ; ಹೋದ ಕೂಡಲೆ ಊಟ ಬಂದೇ ಬಿತ್ತದೆ ನಿಮ್ಮೆದುರಿಗೆ. ಉಳಿದವರ ಮಾತು ಹಾಗಲ್ಲ; ಅವರಿನ್ನು ಹೋಗಿ ಅಡಿಗೆ ಮಾಡಿಕೊಳ್ಳಬೇಕು. ಎಲ್ಲರೂ ದಣಿದಿದ್ದೀರಿ' ಹೋಗಿರಿ ! ನೀವು ಬರುವ ವರೆಗೆ ನಾನು ಪಹಾರಾ ಮಾಡ್ತೇನೆ. ನೀವು ನಿದ್ದೆ ಮಾಡಿದರೂ ಹುಷಾರಿ ಯಿಂದಿರಬೇಕು ! ಮೊನ್ನೆ ಪೋಲೀಸರ ಬಂದೂಕುಗಳು ಕಳವಾದದ್ದನ್ನು ಕೇಳಿದ್ದೀರಿಲ್ಲೊ? ಯಾವ ಮಾಯದಿಂದ ಅವರು ಬಂದಾರು ಹೇಳುವದು ಕಷ್ಟ; ಮೈ ತುಂಬ ಕಣ್ಣುಬೇಕು ! ಯಾರ ಮೇಲೂ ಏನೂ ತಂದುಕೊಳ್ಳದ ಹಾಗೆ ಒಮ್ಮೆ ಈ ಜವಾಬುದಾರಿಯಿಂದ ಸುಸೂತ್ರ ಪಾರಾಗೋಣ !" ಎಂದು ಹೇಳಿ ಹವಾಲದಾರ ಬುದ್ದಪ್ಪ, ನಡುಪಟ್ಟಿಯನ್ನು ಬಿಗಿಮಾಡಿ ಕೊಂಡು, ಟೊಪ್ಪಿಗೆಯನ್ನು ತುಸು ಮುಂದಕ್ಕೆ ಸರಿಸಿ, ಬಂದೂಕನ್ನು ಎತ್ತಿ ಹೆಗಲಮೇರಿಸಿದ. ಅವನೆದುರಿಗೆ ಸಾಲಾಗಿನಿಂತ ನಾಲ್ಕು ಜನ ಪೋಲೀ ಸರು ಅವನಿಗೆ ಸಲಾಮು ಮಾಡಿ, ಅಲ್ಲಿಂದ ಹೊರಟು ತಮ್ಮ ತಮ್ಮ ಬಿಡಾ ರಕ್ಕೆ ಬಂದರು.

ನಾಗನಹಾಳು ಸ್ಟೇಶನ್ನು ಸುಟ್ಟು ಸುಮಾರು ಎರಡು ತಿಂಗಳಾಗಿತ್ತು. ಆ ಮೇಲೆ ತುಸು ದಿವಸಗಳಲ್ಲಿಯೆ ಅಲ್ಲಿಗೆ ಪೋಲೀಸರ ಕಾವಲು ಬಂತು. 'ಥರ್ಡ್‌ಕ್ಲಾಸ್ ವೇಟಿಂಗ ರೂಮ್' ಎನ್ನಿಸಿಕೊಳ್ಳುವ ಭಾಗದಲ್ಲಿಯೆ ಎರಡು ಕಂಬಕ್ಕೆ ಎರಡು ಟೇಲಿಫೋನಿನ ಪೆಟ್ಟಿಗೆಗಳನ್ನು ತೂಗುಹಾಕಿ, ಹಗಲು ಬಿಸಿಲಿನ ಬೇಗೆಯಲ್ಲಿ, ರಾತ್ರಿ ಅಂಜಿಕೆಯ ಆವರಣದಲ್ಲಿ, ಇಬ್ಬರು ಮಾಸ್ತರರು ತಮ್ಮ ಕೆಲಸ ನಡೆಯಿಸಿದ್ದರು. ಹತ್ತಿರದಲ್ಲಿಯೆ ಪೋಲೀಸರು ತಮಗಾಗಿ ಒಂದು ಡೇರೆ ಹೊಡೆದುಕೊಂಡಿದ್ದರು. ರಾಮುಜಿ ತನ್ನ ಸಂಸಾರ ಕಟ್ಟಿಕೊಂಡು ಬಂದಿದ್ದ. ಅವನ ಸಂಸಾರವೆಂದರೆ ಅವನ ಹೆಂಡತಿಯಷ್ಟೇ, ಬೇರೆ ಯಾರೂ ಇರಲಿಲ್ಲ. ಉಳಿದವರು ತಮ್ಮ ಸಂಸಾರ ತಂದಿರಲಿಲ್ಲ. ಕಲ್ಲೆಣ್ಣೆ ಇಡುವ ಕೋಣೆ ಸುಟ್ಟು ನಾಲ್ಕೂ ಗೋಡೆಗಳು ದಿಗಂಬರ ವೇಷ ದಲ್ಲಿ ನಿಂತಿದ್ದುವು. ರಾಮುಜಿಗೆ ಅದು ತನ್ನ ಸಂಸಾರಕ್ಕೆ ಸಾಕಾಗಬ

ಹೌದು ಎನಿಸಿತು. ಚಳಿಗಾಲ ಕಳೆದು ಬೇಸಿಗೆಗೆ ಅದೇ ಪ್ರಾರಂಭವಾಗಿತ್ತು. ಮಳೆಯು ಆಂಜಿಕೆಯಿರಲಿಲ್ಲ. ರಾಮುಜಿ ಮತ್ತು ಲಕ್ಷ್ಮಿ ಅಲ್ಲಿ ತಮ್ಮ ಪ್ರಪಂಚ ಹೂಡಿದರು.

ರಾಮುಜಿ ತನ್ನ ಕೋಣೆಗೆ ಬಂದಾಗ, ರಾತ್ರಿ ೯ ಗಂಟೆಯಾಗುತ್ತ ಬಂದಿತ್ತು. ಎರಡು ಬಿದಿರುಗಳುಗಳನ್ನು ಅಡ್ಡವಾಗಿ ಬಾಗಿಲಿಗೆ ನಿಲ್ಲಿಸಿದ್ದಿತ್ತು. ಲಕ್ಷ್ಮಿ ಅದುವರೆಗೆ ಮನೆಗೆ ಬಂದಿರಲೇ ಇಲ್ಲ. ರಾಮುಜಿಗೆ ಒಮ್ಮೆಲೆ ಸಿಟ್ಟು ತಲೆಗೇರಿತು; ಜಾಡಿಸಿ ಬಿದಿರುಗಳನ್ನು ಒದ್ದುಬಿಟ್ಟ; ಅವು ಸಪ್ಪಳ ಮಾಡುತ್ತ ಉರುಳಿ ಬಿದ್ದವು. ಒಳಗೆ ಹಣಿಯಿಕ್ಕಿ ನೋಡಿ 'ಲಕ್ಷ್ಮಿ' ಎಂದು ಕೂಗಿದ. ಅವಳು ಇಲ್ಲವೆಂಬುದು ಕಾಣುತ್ತಿತ್ತು; ಆದರೂ ಕೂಗಿದ. ನಡುಪಟ್ಟಿಯನ್ನು ಬಿಚ್ಚಿ ಹೆಗಲ ಮೇಲೆ ತೂಗು ಬಿಟ್ಟ. ಟೊಪ್ಪಿಗೆ ತೆಗೆದು ಪೆಟ್ಟಿಗೆಯ ಮೇಲೆ ಎಸೆದ. ಕಾಲಲ್ಲಿ ಬಿದ್ದ ಕಟ್ಟಿಗೆಯನ್ನು ಕೈಯಲ್ಲಿ ತಕ್ಕೊಂಡು ಹೊರಬಿದ್ದ.

ರಾಮುಜಿಗೆ ಒಮ್ಮೆಲೆ ಲಕ್ಷ್ಮಿಯ ಮೇಲೆ ಇಷ್ಟೊಂದು ಕೋಪಬರಲು ಕಾರಣವಿತ್ತು. ಅಂದು ಅವನ ದೊಡ್ಡ ಸಾಹೇಬರು ತಪಾಸಿಗೆ ಬಂದಿದ್ದರು; ಇಡಿಯ ದಿನ ರಾಮುಜಿಯ ಹೊಟ್ಟೆಯಲ್ಲಿ ಬೀಡಿಯ ಹೊಗೆಯ ಹೊರತು ಏನೂ ಹೋಗಿರಲಿಲ್ಲ. ಆದಿನ ಅವನ ಮೈಮೇಲೆ ಬಿದ್ದ ಕೆಲಸ ಅಷ್ಟಿಷ್ಟಲ್ಲ. 'ಅವನನ್ನು ಹಿಡಿದು ತಾ, ಇವನನ್ನು ಹೆಡಮುರಿಕೆ ಬಿಗಿ ಇಂಥವರ ಮನೆಗೆ ಜಪ್ತಿ ಒಯ್ಯಿ. ಅಂಥವರಿಗೆ ಕೋಳಹಾಕಿ ಸಾಗಿಸು!' ಹೀಗೆ ಒಂದಲ್ಲ ಎರಡಲ್ಲ, ನೂರೆಂಟು ಸಂಕಟಗಳು! ಮೊದಲೆ ಕಾಡಿನಲ್ಲಿಯ ಸ್ಟೇಶನ್ನು. ಅಷ್ಟೇ ಕೆಂಪು ಹಳ್ಳಿಗಳು. ಯಾವ ಊರಲ್ಲಿಯೂ ನೀರಿನ ಹೊರತು ಏನೂ ದೊರೆಯುತ್ತಿರಲಿಲ್ಲ. ಅದರಲ್ಲಿಯೂ ಪೋಲೀಸರಿಗ ದೊರೆಯುವುದು ಪೂರಾ ಕಷ್ಟವಾಗಿತ್ತು.

ತಾನು ಮನೆಗೆ ಹೋದ ಕೂಡಲೆ, ಲಕ್ಷ್ಮಿ ತನ್ನ ಕಾಲಿಗೆ ಬಿಸಿನೀರು ಕೊಟ್ಟು ಕೈಯಲ್ಲಿ ಬಿಸಿರೊಟ್ಟಿ ಇಡುವಳೆಂದು ಅವನು ಹಂಬಲಿಸಿ ಬಂದಿದ್ದ. ಆದರೆ ಅವಳ ದುರ್ದೈವಕ್ಕೆ—ಆದಿನ ಅವಳಿಗೆ—ಪೋರ್ಟರನ ಮನೆಯಲ್ಲಿ ಹರಟೆಗೆ ಕೂಡುವ ದುರ್ಬುದ್ಧಿಯಾಯಿತು. ಮಧ್ಯಾಹ್ನ ಅಡಿಗೆ ಮಾಡಿ, [illegible] ಕಾಯ್ದಳು; ಹೊತ್ತು ತಿರುಗಿದರೂ ಅವನು ಬರಲಿಲ್ಲ

ವೆಂದು ತಾನೇ ಉಂಡು ಬಿಟ್ಟಳು. ಇದೇ ದಿನ ಅವನ ಮೋರೆಯೇ ಅವಳಿಗೆ ಕಂಡಿರಲಿಲ್ಲ; ದೊಡ್ಡ ಸಾಹೇಬರು ಬೇರೆ ಬಂದಿದ್ದರು. ರಾಮುಜಿ ಎಲ್ಲಿದ್ದನೊ, ಏನು ಮಾಡುತ್ತಿದ್ದನೊ! ಅವಳು ತಾನಾಗಿ ಹೋಗಿ ಅವನನ್ನು ಕರೆಯುವ ಹಾಗಿರಲಿಲ್ಲ. 'ಬಂದಾಗ ಬರಲಿ, ಅವನು ಬಂದು ಹೇಳಿದ ಮೇಲೆಯೇ ಅಡಿಗೆ ಮಾಡಿದರಾಯಿತು, ಅಡಿಗೆ ಮಾಡಿಟ್ಟರೆ ಅವನು ಬಾರದೆ ಹೋದರೆ ವ್ಯರ್ಥವಾಗುವುದಲ್ಲಾ' ಎಂದು ಅವಳು ಯೋಚಿಸಿದಳು. ಅವಳಿಗೆ ತನಗೆ ಸಾಲುವಷ್ಟು ಮಧ್ಯಾಹ್ನದ ಅಡಿಗೆ ಉಳಿದಿತ್ತು. ಪೋರ್ಟರನ ಹೆಂಡತಿಯೊಡನೆ ಮಾತಿಗೆ ಕುಳಿತವಳು ಕುಳಿತೇ ಬಿಟ್ಟಳು. ಅವಳ ಮಗುವನ್ನು ಎತ್ತಿ ಎತ್ತಿ ಆಡಿಸುವ ಹುಚ್ಚೊಂದು ಇವಳಿಗೆ. ಅವಳೂ ಚೊಚ್ಚಲು ಹಡೆದಿದ್ದಳು; ತನ್ನ ತವರುಮನೆಯವರು ಕೊಟ್ಟ ಕೂಸಿನ ಅರಿವೆ ಬೆಳ್ಳಿಯ ಕಾಲ್ಗಡ—ಉಡುದಾರ ಲಕ್ಕಿಗೆ ತೋರಿಸುತ್ತಿದ್ದಳು. ಲಕ್ಕಿ ಕೂಸಿನ ಮೈಯಲ್ಲಿ ಅವುಗಳನ್ನು ಹಾಕಿ, ತೊಡಿಸಿ, ನೋಡುತ್ತಿದ್ದಳು.

ಆ ಹೊತ್ತಿಗೆ ರಾಮುಜಿ ಅಂಗಳದಲ್ಲಿ ಬಂದು ನಿಂತು ಒಮ್ಮೆಲೆ ಕೂಗು ಹಾಕಿದ: "ಲಕ್ಕಿ, ಹೊರಗೆ ಬಾ!" ಮೈಮರೆತು ಕುಳಿತಾಗ ಏಕಕಾಲಕ್ಕೆ ಸಿಡಿಲಿನ ಸಪ್ಪಳವಾದರೆ ಹೇಗೆ ಎದೆ ಝಲ್ಲೆನ್ನಬೇಕೊ ಹಾಗಾಯಿತು ಅವಳಿಗೆ. ಕೂಸನ್ನು ಕೆಳಗಿರಿಸಿದಳು, ಎದ್ದು ಹೊರಗೆ ಬಂದಳು. ರಾಮುಜಿ ಕೈಯಲ್ಲಿಯ ಬಿದಿರಗಳುವನ್ನು—ಕಾಣದ ಹಾಗೆ—ಬೆನ್ನ ಹಿಂದೆ ಹಿಡಿದಿದ್ದ ತೊಗಲಿನ ನಡುಪಟ್ಟಿ ಹೆಗಲ ಮೇಲೆ ತೂಗಾಡುತ್ತಿತ್ತು. ಲಕ್ಕಿ ಹತ್ತಿರ ಬಂದಳು.

"ಕತ್ತೆ, ಭೋ...ಹಲ್‌ಕಟ್ ಛಾಂ...." ಎಂದವನೇ ಬಿದಿರಿನಿಂದ ಏಟೊಂದನ್ನು ಬಿಗಿದ. "ಯಪ್ಪಾ, ಸತ್ತೆನೊ..." ಎಂದು ಚೀರುತ್ತ ಲಕ್ಕಿ ನೆಲಕ್ಕೆ ಬಿದ್ದಳು. ರಾಮುಜಿ ಅವಳನ್ನು ದರದರನೆ ಎಳೆಯುತ್ತ, ಚಪ್ಪಲಿಯ ಕಾಲಿನಿಂದ ತುಳಿಯುತ್ತ, ಬಾಯಿಂದ ಆಡಬಾರದ ಅವಾಚ್ಯ ಮಾತುಗಳನ್ನಾಡುತ್ತ ಕೋಣೆಗೆ ಎಳೆದು ತಂದ. ಬಿದಿರಗಳು ಮುರಿದು ಹೋಗಿತ್ತು; ತೊಗಲಿನ ಪಟ್ಟಿಯು ಅವನ ಕೈಯಲ್ಲಿ ಬಂದಿತ್ತು; ಅದರ ಹಿತ್ತಾಳೆಯ ಬಿಲ್ಲೆಯ ನಾಲ್ಕಾರು ಮುದ್ರೆಗಳು ಅವಳ ಮೈಮೇಲೆ ಮೂಡಿ

ದುಷ್ಟ. ಅವಳು ನೆಲದ ಮೇಲೆ ಬಿದ್ದು, ನೋವಿನ ಬಾಧೆ ತಾಳದೆ ಕಳವಳಿಸಿ ಕಿರಚುತ್ತಿದ್ದಳು. ಅವಳ ಆರ್ತಧ್ವನಿ ಕೇಳಿ ಉಳಿದ ಪೋಲೀಸರು, ರಾತ್ರಿ ಡ್ಯೂಟಿಯ ಸಣ್ಣ ಮಾಸ್ತರರು, ಪೋರ್ಟರರು ಅಲ್ಲಿ ನೆರೆದರು. ಹವಾಲದಾರ ನಿಂತಲ್ಲಿಂದಲೆ ರಾಮಜಿಯ ಹೆಸರಿನಿಂದ ಅಬ್ಬರಿಸಿದ. ನೆರೆದವರು ರಾಮಜಿಯನ್ನು ಎಳೆದು ಹೊರಗೆ ತಂದು, ಒಂದು ಕಲ್ಲಗುಂಪೆಯ ಮೇಲೆ ಅವನನ್ನು ಕುಕ್ಕರಿಸಿದರು. ಲಕ್ಕಿಗೆ ಬಿದ್ದ ಏಟಿನ ಕಲ್ಪನೆ ಆ ಕತ್ತಲ್ಲಿ, ಯಾರಿಗೂ ಆಗಲಿಲ್ಲ. ರಾಮಜಿಗೆ ಛೀ ಹಾಕಿ ಸಮಾಧಾನ ಹೇಳಿ 'ಮತ್ತೊಮ್ಮೆ ಅವಳ ಮೇಲೆ ಕೈ ಎತ್ತಿದರೆ ನಿನ್ನನ್ನೇ ಥಳಿಸುವೆವು.' ಎಂದು ಬೆದರಿಸಿ, ಅವನ ಜತೆಯ ಪೋಲೀಸರು ಹೊರಟು ಹೋದರು. 'ಊಟಕ್ಕೆ ಬಾ!' ಎಂದು ಕರೆದರೂ ಅವನು ಹೋಗಲಿಲ್ಲ.

ಸಣ್ಣ ಮಾಸ್ತರರು ಆಫೀಸಿನ ಮೆಟ್ಟಲನ್ನು ಹತ್ತುವಾಗ ಬುದ್ದಪ್ಪನಿಗೆ ಹೇಳಿದರುಃ—"ಅಲ್ರೀ, ಹವಾಲದಾರ ಸಾಹೇಬರೆ, ಅವಳು ಅಡಿಗೆ ಮಾಡಲಿಲ್ಲವೆಂದು ಹೆಣಬೀಳ ಹೊಡೆಯುವುದೇ? ತೀರ ತಲೆತಿರುಕ ಕಾಣ್ತಾನೆ!"

"ಅವನಿಗೆ ಹುಣ್ಣಿವಿಗೊಮ್ಮೆ, ಅಮಾವಾಸ್ಯೆಗೊಮ್ಮೆ ಸನ್ನಿ ಸೇರ್ತದೆ ಮೈಯಲ್ಲಿ!"

"ಆದರೆ...ಮಾತಿಗೆ ಕುಳಿತನಂದ್ರೆ ಎಷ್ಟು ಕಥೆ ಹೇಳ್ತಾನೆ, ಎಷ್ಟು ನಗಿಸ್ತಾನೆ! ಹರಿದಾಸರು ಅವನ ಮುಂದೆ ಜಕ್ಕಿಸಿದರು. ಆದರ ಹೇಣ್ತಿನ್ನ ಹೀಗೆ ಬಡಿಯೋದನ್ನು ನೋಡಿದರೆ, ಅವನೇನೂ ಮನುಷ್ಯನಲ್ಲ. ರಾಕ್ಷಸ–ಅನಿಸುತ್ತದೆ!"

"ಏನು ಹೇಳೋದು, ಆ ಖೋಡಿ ಹೇಣ್ತಿನೂ ಹಾಗೇ! ಮಾತುಮಾತಿಗೂ ಎಡವಟ್ಟು! ಈಗ ನಾಲ್ಕು ಸಾರೆ ಓಡಿ ಹೋಗಿ ನಾಲ್ಕು ಸಾರೆ ತಿರುಗಿ ಬಂದಾಳ ಆಕೆ!"

"ಅಲ್ರೀ. ಇಂವಗ ಆಕಿ ಹೇಣ್ತೀ ಅಂಬೋದಾದರೂ ನಿಜವೇನು? ಹೇಣ್ತಿ ಅಲ್ಲ, ಹಾಗS ಬಂದು ಕೂಡಿದಾಕೀ...ಅಂತ ನಿಮ್ಮೊಬ್ಬ ಪೋಲೀಸನೇ ಅಂತಿದ್ದ!"

"ಮೊದಲಿಗೆ ಅಂವ ಒಬ್ಬ ಗೊಂದಲಿಗ, ಅದು ಒಂದು ಜೋಗತಿ! ಗಂಡ-ಹೆಂಡತಿ ಹಾಗೆ ಇರ್‍ತಾರೆ. ಮದುವೆ ಆಗಿದ್ದರೂ ಆಗಿರಬಹುದು! ನಮಗೇನು ಮಾಡೋದು? ಅಂವ ನಮ್ಮ ಡ್ಯೂಟಿ ಒಂದು ಸರಿಯಾಗಿ ಮಾಡಿದರಾಯ್ತು!"

"ಅದು ಸರಿ ಯಾರಿದ್ದರೂ ಹೀಗೆ ಹೊಡೀಬಾರದು!"

"ತಿಳಿದವರದೊಂದು ರೀತಿ, ಹುಂಬರದೊಂದು ರೀತಿ! ಏನಾದರೂ ಅಂವ ಬಹಳ ಸೊಕ್ಕಿಗೆ ಬಂದಾನ!"

ಹವಾಲದಾರ ತನ್ನ ಸಹರಿ ನಡೆಯಿಸಿದ; ಮಾಸ್ತರರು ತಮ್ಮ ಕೆಲಸದಲ್ಲಿ ತೊಡಗಿದರು.

ಕೆಲಹೊತ್ತು ರಾಮಜಿ ಕಲ್ಲುಗುಂಪೆಯ ಮೇಲೆ ಹಾಗೆಯೆ ಕುಳಿತ. ಆಗಾಗ ಹೆಂಡತಿ ನರಳುವುದು ಕೇಳಬರುತ್ತಿತ್ತು. ಅವನಿಗೆ ಮೈಲಿ ತುಂಬ ದಣಿವಾಗಿತ್ತು. ಮೇಲೆ ಹೊಟ್ಟೆಯಲ್ಲಿ ಅನ್ನವಿಲ್ಲದ್ದೊಂದು ಹೆಂಡತಿಯನ್ನು ಬಡಿದದ್ದೊಂದು! ಅವನಿಂದ ಹೆಚ್ಚುಕಾಲ ಅಲ್ಲಿ ಕುಳಿತುಕೊಳ್ಳಲಿಕ್ಕಾಗಲಿಲ್ಲ. ಕೋಣೆಗೆ ಬಂದ ದೀಪ ಅಂಟಿಸಿದ, ಹಾಸಿಗೆಯ ಸುರುಳಿಯನ್ನು ಕಾಲಿನಿಂದ ಒದ್ದು, ಉರುಳಿಸಿದ. ಒಂದು ಸಲ ಒಲೆಯ ಕಡೆಗೆ ನೋಡಿದ; ಅದರ ಮೇಲೆ ಏನೋ ಮುಚ್ಚಿಟ್ಟಹಾಗಿತ್ತು. ಅದರ ಹತ್ತಿರ ಹೋಗಿ ಮುಚ್ಚಳವನ್ನು ಕೈಯಿಂದ ಬಡಿದು ಹಾರಿಸಿದ. ಅದು ಪಾತ್ರೆಗೂ ಬಡಿದು, ಅನ್ನವೆಲ್ಲ ಸೂರೆಯಾಯಿತು. ಎದ್ದು, ಒಂದು ತಂಬಿಗೆ ನೀರು ಕುಡಿದ, ಹಾಸಿಗೆಯ ಮೇಲೆ ಬಂದು ಕುಳಿತು ಹೆಂಡತಿಯನ್ನು ನೋಡಿದ, ದೀಪತೆಗೆದು ಮೈಯನ್ನು ನೆಲಕ್ಕೆ ನೀಡಿದ.

ಲಕ್ಕಿ ಮುಖವನ್ನು ಸೆರಗಿನಿಂದ ಮುಚ್ಚಿಕೊಂಡು ನರಳುತ್ತ ಬಿದ್ದಿದ್ದಳು; ನಿದ್ರೆ ಇದಲಾರದು. ಅವಳು ಆಗಾಗ 'ಅಯ್ಯೊ....ಅಯ್ಯಯ್ಯಪ್ಪಾ ಸಾಯ್ತೀನ್ರೋ ' ಎಂದು ಹಲಬುತ್ತಿದ್ದಳು. ಟೆಲಿಫೋನಿನ ಗಂಟೆ, ಮಾಸ್ತರರ ಮಾತು, 'ಗಾಡಿ ಔಟ್' ಎಂಬ ಕೂಗು, ಜಿಟ್ಟಿಗಳ 'ಜಿರ್‍ರ್‍ರ್‍ಗ್'....ಎಂಬ ಶಬ್ದ ಆಗಾಗ ಕಿವಿಯ ಮೇಲೆ ಬೀಳುತ್ತಿದ್ದುವು. ಜನರೆಲ್ಲ ಮಲಗಿ ಬಿಟ್ಟಿದ್ದರು. ರಾಮಜಿಗೆ ನಿದ್ರೆ ಬರಲಿಲ್ಲ. ಹಾಸಿಗೆಯ ಮೇಲೆ ಹೊರಳಾಡಿದ. ತುಸು ಹೊತ್ತು ಎದ್ದು ಕುಳಿತ, ಮತ್ತೆ ಅಡ್ಡಾದ.

ಏನಾದರೂ ಸದ್ದು ಬಾರದಂತಾಯಿತು. ಎರಡು ಗಂಟೆಯ ಸುಮಾರಿಗೆ ಒಂದು ಗಾಡಿ ಬಂದು ಹೋಯಿತು. ಆಗಲೂ ಅವನಿಗೆ ಎಚ್ಚರು. ಲಕ್ಕಿ ಆ ಹೊತ್ತಿಗೆ ನರಳುವುದನ್ನು ಕಡಿಮೆ ಮಾಡಿದ್ದಳು ಬಹುಶಃ ಅವಳಿಗೆ ಜಂಪು ಹತ್ತಬೇಕು. ರಾಮುಜಿ ಎದ್ದು, ಜಮಖಾನೆಯನ್ನು ತೆಗೆದು ಅವಳ ಮೇಲೆ ಹೊಚ್ಚಿದ, ತನ್ನ ಟೋಪಿ ಮತ್ತು ನಡುಪಟ್ಟಿಯನ್ನು ಕೈಯಲ್ಲಿ ಹಿಡಿದುಕೊಂಡು, ಮೆಲ್ಲಗೆ ಹೆಜ್ಜೆಯಿಕ್ಕುತ್ತ ಹವಾಲದಾರನ ಎದುರು ಬಂದು ನಿಂತ. ರಾಮುಜಿ ಹೀಗೆ ಹೊತ್ತಿಗೆ ಮೊದಲೇ ಬಂದು ನಿಂತ ದ್ದನ್ನು ನೋಡಿ ಹವಾಲದಾರನಿಗೆ ತುಸು ಆಶ್ಚರ್ಯವಾಯಿತು.

"ಬಡಿದಾಟ ಮುಗೀತೇನು? ಹೆಂಡತಿಯ ಜೀವ ಅದೆಯೋ, ಹೋಗಿದೆಯೊ? ಮನುಷ್ಯರಲ್ಲ ನೀವು, ದನಕ್ಕೂ ಕಡೆ! ಏನು ಇಷ್ಟು ಬೇಗ ಬಂದಿರಿ?"

"ನಾನು ಪಹರಾ ಮಾಡ್ತೀನಿ ಮಾಸ್ತರ್; ನನಗೆ ನಿದ್ದೆ ಬರವೊಲ್ಲದು?"

"ಸರಿ ಆಗಲಿ ಹಾಗಾದರೆ! ನಾನು ಬದಲು ಕಳಿಸುವವರೆಗೆ ಪಹರಾ ಮಾಡಬೇಕು! ನಾಳೆ ರಾತ್ರಿಯವರೆಗೆ ನಿಮ್ಮನ್ನು ಹೀಗೆಯೇ ಕೊಳೆಹಾಕ್ತೇನೆ; ಅಂದರಾದರೂ ನಿಮಗೆ ಬುದ್ಧಿ ಬರಬಹುದು! ಹೆಂಡತಿಯ ಮೇಲೆ ಶೌರ್ಯ ತೋರಿಸೊ ಗಂಡಸರು ನೀವು—ಅದರಲ್ಲಿ ಸ್ಪೆಶಲ್ ಪೋಲೀಸ್! ಗುನ್ಹೆ ಮಾಡಿದ ಒಬ್ಬನನ್ನಾದರೂ ಪತ್ತೆ ಹಚ್ಚಿ ನಿಮ್ಮ ಶೌರ್ಯ ತೋರಿಸಿರಿ! ಅಚ್ಛಾ, ನಿಮ್ಮ ಬಂದೂಕು ತೊಗೊಂಡು ಬರ್ರಿ!"

ರಾಮುಜಿ ಹೋಗಿ ಡೇರೆಯೊಳಗಿಂದ ತನ್ನ ಬಂದೂಕನ್ನು ತಂದು ಡ್ರೆಸ್ಸು ಸರಿಮಾಡಿಕೊಂಡ. ಹವಾಲದಾರನಿಗೆ ಸಲಾಮು ಕೊಟ್ಟು ಡ್ಯೂಟಿಗೆ ನಿಂತ.

'ತಲೆ ಶಾಂತವಾಗಿದೆಯೊ ಇಲ್ಲೊ? ಮನೆಯಲ್ಲಿ ನಿದ್ದೆ ಬರಲಿಲ್ಲೆಂದು ಇಲ್ಲಿ ನಿದ್ದೆ ಹೋಗಬ್ಯಾಡ್ರಿ!"

"ಇಲ್ಲ ಮಾಸ್ತರ್!"

ಹವಾಲದಾರ ತನ್ನ ಡೇರೆಗೆ ಹೋದ. ಸ್ಟೇಶನ್ ಮಾಸ್ತರರು ಇದನ್ನೆಲ್ಲ ನೋಡುತ್ತ ತಮ್ಮ ಕೆಲಸ ನಡೆಯಿಸಿದ್ದರು. ಆ ಹೊತ್ತಿಗೆ ಗಾಡಿಗಳಾವುವೂ ಇರಲಿಲ್ಲ. ಮಧ್ಯೆ ಎರಡು ಗಂಟೆ ನಿದ್ದೆಗೆ ಸ್ವಲ್ಪ ಅವಕಾಶವಿತ್ತು. ತಮ್ಮ ರಜಿಸ್ಟರುಗಳನ್ನು ತುಂಬುವ ಕೆಲಸ ಮುಗಿಸಿದ ಮೇಲೆ ರಾಮುಜಿಯನ್ನು ಮಾತನಾಡಿಸಬೇಕೆಂದು ಮಾಸ್ತರರ ಮನಸ್ಸಿನಲ್ಲಿ ಬಂತು. ದಿನಾಲು ಹಾಗೆ ಅವರು ಅವನೊಡನೆ ಕಾಸುಗಟ್ಟಲೆ ಹರಟೆ ಹೊಡೆಯುತ್ತಿದ್ದರು. ಇಂದು ಅವನನ್ನು ಮಾತನಾಡಿಸಲು ಅವರಿಗೆ ಅಂಜಿಕೆಯೆನಿಸಿತು. ಅವನು ಅಷ್ಟು ಸಿಟ್ಟಿಗೆದ್ದುದನ್ನು ಅವರು ಎಂದೂ ನೋಡಿರಲಿಲ್ಲ. 'ಹೋಗಲಿ, ಪೀಡಾ ಸಂಗತಿ!' ಎಂದು ಯೋಚಿಸಿ, ಆ ದಿನ ಪೋಲೀಸ್ ಸಾಹೇಬರು ಬಿಟ್ಟು ಹೋದ 'ಟಾಯಿಮ್ಸ್' ಪತ್ರಿಕೆಯನ್ನು ತಕ್ಕೊಂಡು, ಹಾಸಿಗೆಯ ಮೇಲೊರಗಿ, ಆ ಮಬ್ಬು ಬೆಳಕಿನಲ್ಲಿಯೆ ತಿಳಿದಷ್ಟು ಓದತೊಡಗಿದರು. ರಾಮುಜಿಗೆ ಇಂದು ಮಾಸ್ತರರನ್ನು ಮಾತನಾಡಿಸುವ ಮನಸ್ಸಿರಲಿಲ್ಲ; ಬಂದೂಕನ್ನು ಹೆಗಲ ಮೇಲೆ ಹೊತ್ತುಕೊಂಡು ಅವನು ಆಫೀಸಿನ ಸುತ್ತು ಭಾರವಾದ ಹೆಜ್ಜೆಯಿಕ್ಕುತ್ತ ಫೇರಿ ಹಾಕತೊಡಗಿದ.

ಮಾಸ್ತರರು ಬಹಳವಾದರೆ ಹತ್ತು ನಿಮಿಷ ಓದಿರಬಹುದು; ಅವರ ಕಣ್ಣಲ್ಲಿ ನಿದ್ದೆ ತೂಗಾಡಹತ್ತಿತ್ತು. ಹಾಗೆಯೆ ಅವರ ಕಣ್ಣು ತಾವಾಗಿ ಮುಚ್ಚಿದುವು ಕೈಯಲ್ಲಿಯ 'ಟಾಯಿಮ್ಸ' ಕಾಲಕೆಳಗೆ ಬಿದ್ದಿತು.

ಈಗ ಕತ್ತಲು ಹರಿಯುವ ಹೊತ್ತಿನ ತಂಪುಗಾಳಿ ಬೀಸತೊಡಗಿತು. ರಾಮುಜಿಗೆ ಫೇರಿ ಹಾಕುವ ತ್ರಾಣವಿರಲಿಲ್ಲ. ಕಾಲು ಒಂದೇ ಸವನೆ ಹರಿಯುತ್ತಿದ್ದುವು. ಕೀಲು-ಕೀಲುಗಳೆಲ್ಲ ಕಿತ್ತು ಬೀಳುವ ಹಾಗೆ ನೋಯುತ್ತಲಿದ್ದುವು. ಅರ್ಧ ಸುಟ್ಟ ಬೆಂಚೊಂದನ್ನು ಗೋಡೆಗೆ ಆನಿಸಿ ನಿಲ್ಲಿಸಲಾಗಿತ್ತು. ರಾಮುಜಿ ಅಲ್ಲಿ ಬಂದು ಕುಳಿತ; ಬಂದೂಕನ್ನು ನೆಲದ ಮೇಲೆ ನಿಲ್ಲಿಸಿ, ಎರಡೂ ಕೈಗಳನ್ನು ಅದರ ಬಾಯಿಮೇಲಿಟ್ಟು, ಅದರ ಆಸರಕ್ಕೆ ಹಣೆ ಹಚ್ಚಿದ. ತಲೆ ಭಾರವಾಗಿ, ಎಡ-ಬಲ ಹಣೆಯ ಮುಲುಕುಗಳು ಝುಣ್ ಝುಣ್ ಎಂದು ಹಾರಿಹಾರಿ ಚುಚ್ಚುತ್ತಿದ್ದುವು. ಕೈಯ ಬೆರಳುಗಳಿಗೆ ಜೋಮು ಹಿಡಿಯಿತು. ಹಣೆಯೆತ್ತಿ, ಬೆಂಚಿನ ಬೆನ್ನು ಹಲಗೆಗೆ ಆತುಕೊಂಡು ಕೆಲಹೊತ್ತು ಕುಳಿತ. ಆಗ ಅವನ ಹೊರತು ಒಂದು ನರ

ಪ್ರಾಣಿಯೂ ಅಲ್ಲಿ ಎಚ್ಚರವಿರಲಿಲ್ಲವೇನೋ! ಆಫೀಸಿನಲ್ಲಿ ದೀಪವೊಂದು ಉರಿಯುತ್ತಿತ್ತು. ಟೇಲಿಫೋನಿನ ಫರ್‌ಫರ್ ಶಬ್ದವು ಅವ್ಯಾಹತವಾಗಿ ನಡೆದಿತ್ತು. ರಾಮುಜಿಗೆ ಬಹಳ ಹೊತ್ತು ಕಣ್ತೆರೆದು ಆ ಸ್ಥಿತಿಯಲ್ಲಿ ಕುಳಿತಿರುವುದಾಗಲಿಲ್ಲ. ಕತ್ತನ್ನು ಬೆನ್ನು ಹಲಗೆಯ ಮೇಲೆ ಚೆಲ್ಲಿಕೊಟ್ಟು, ಬಂದೂಕನ್ನು ಬೆಂಚಿಗೆ ಆಸಿಸಿ ಹಿಡಿದು, ಕುಳಿತ ಸ್ಥಿತಿಯಲ್ಲಿಯೆ ಒರಗಿಕೊಂಡ. ಆರೇಳು ನಿಮಿಷಗಳಲ್ಲಿಯೆ ಅವನನ್ನು ನಿದ್ದೆ ಪೂರ್ಣವಾಗಿ ಆವರಿಸಿಕೊಂಡಿತು. ಮರುಕ್ಷಣದಲ್ಲಿಯೆ ಬಂದೂಕಿನ ಮೇಲಿದ್ದ ಅವನ ಕೈ ಜಾರಿ ಅದು ಹಿಂದೆ ಸರಿಯಿತು.

ಸುಮಾರು ಅರ್ಧ ಗಂಟೆಯನ್ನು ಅವನು ಹೀಗೆ ನಿದ್ದೆಯಲ್ಲಿ ಕಳೆದಿರಬಹುದು. ಹಲಗೆಯ ಕಠಿಣವಾದ ಭಾಗ ಒತ್ತಿದ ಮೂಲಕ, ಅವನ ಗೋಣು ನೋಯುತೊಡಗಿತು. ಆ ಹೊತ್ತಿಗೆ ಟೆಲಿಫೋನಿನ ಗಂಟೆಯ ಕಿರ್ರಿಂ ಸಪ್ಪಳು ಅವನನ್ನು ಎಚ್ಚರಿಸಿತು. ಕಣ್ತೆರೆದು ನೋಡಿದ; ಮಾಸ್ತರರೂ ಏಳುವದರಲ್ಲಿದ್ದರು. ಬಂದೂಕಿನ ಕಡೆಗೆ ಅವನ ಕೈ ಹೋಯಿತು. ಆದರೆ... ಆದರೆ. ಅಲ್ಲೇನಿದೆ? ಬಂದೂಕು ಇರಲಿಲ್ಲ! ಅದು ಯಾವಾಗಲೋ ಮಾಯವಾಗಿತ್ತು! ಕಣ್ಣಲ್ಲಿ ಮಿಂಚು ಹೊಡೆದ ಹಾಗಾಗಿ ಗಡಬಡಿಸಿ, ಚಟ್ಟನೆ ಎದ್ದವನೇ ಅತ್ತಿತ್ತ ಕೈ ಸವರಾಡಿಸತೊಡಗಿದ. ಆದರೆ ಅವನ ಕೈಗೆ ಬಂದೂಕು ಹತ್ತಲಿಲ್ಲ; ಬೆಂಚಿನ ಸುಟ್ಟ ಭಾಗದ ಕಪ್ಪು ಮಾತ್ರ ಹತ್ತಿತು.

ಮಾಸ್ತರರು ಇನ್ನೂ ಟೆಲಿಫೋನಿನ ಬಾಯಲ್ಲಿ ತಮ್ಮ ಬಾಯನ್ನು ಇಟ್ಟು ಮಾತು ನಡೆಯಿಸಿದ್ದರು. ರಾಮುಜಿ ಒಳಗೆ ಬಂದದ್ದನ್ನು ಅವರು ನೋಡಲಿಲ್ಲ.

"ಮಾಸ್ತರ್, ನನ್ನ ಬಂದೂಕು ಹೋಗಿದೆ!" ಮುಂದೆ ರಾಮುಜಿಯಿಂದ ಮಾತುಗಳೆ ಹೊರಡಲಿಲ್ಲ. ಈ ಮಾತು ಕಿವಿಗೆ ಬಿದ್ದ ಕೂಡಲೆ ಮಾಸ್ತರರು ಕುಸಿದು ಝುರ್ರನೆ ನೆಲಕ್ಕೇ ಇಳಿದರು. ಅವರಿಗೆ ನಿಲ್ಲುವುದಕ್ಕಾಗಲಿಲ್ಲ. ಕಂಬದ ಆಸರ ಹಿಡಿದು ಟೇಬಲ್ ಹತ್ತಿರ ಬಂದು, ದೀಪ ಏರಿಸಿ, ಅದನ್ನು ಕೈಯಲ್ಲಿ ಹಿಡಿದು—"ಇದೇನೋ ನಮ್ಮ ಪ್ರಾಣಕ್ಕೆ ಬಂದಿದೆ! ಉಳಿದ ಪೋಲೀಸರನ್ನಾದರೂ ಕರೀರಿ; ಸುಮ್ಮನೆ ನಿಂತರೆ

ಹ್ಯಾಗೆ? ಒಮ್ಮೆಲೆ ಆ ಜನರು ಮೈಮೇಲೆ ಬಂದರೆ ನಮ್ಮ ಗತಿಯೇನು? ಏ ಗೂಡು, ಏ ವಲ್ಲೀ, ಏಳ್ರಿ, ಏಳ್ರಿ!" ಎಂದು ಕೂಗತೊಡಗಿದರು. ರಾಮಜಿ ಸೀಟಿ ಹೊಡೆದ. 'ಮಾಸ್ತರ್' 'ಮಾಸ್ತರ್' ಎಂದು ತನ್ನ ಹವಾಲದಾರ ನನ್ನು ಕೂಗಲಾರಂಭಿಸಿದ. ನಿದ್ದೆ ಹೋದವರೆಲ್ಲ ಎದ್ದೆದ್ದು ಕಕ್ಕಾವಿಕ್ಕಿ ಯಾಗಿ ನೋಡತೊಡಗಿದರು. ಹೊರಗೆ ಕಾಲಿಡಲು ಯಾರಿಗೂ ಧೈರ್ಯ ವಿಲ್ಲ. ಹವಾಲದಾರ, ಇಬ್ಬರು ಪೋಲೀಸರು ಒಳಗೆ ಬಂದರು.

ಹವಾಲದಾರ ಸೊಂಟದ ಮೇಲೆ ಎರಡೂ ಕೈಗಳನ್ನಿಟ್ಟು, ತುಟಿ ಯನ್ನು ಕಚ್ಚುತ್ತ, ರಾಮಜಿಯು ಎದುರಿಗೆ ನಿಂತು ಕರ್ಕಶ ಧ್ವನಿಯಿಂದ ಗುಡುಗು ಹಾಕಿದ: "ಏನಾಯಿತು, ರಾಮಜಿ?" ರಾಮಜಿಯ ಕೈಕಾಲು ಗಳು ನಡುಗತೊಡಗಿದ್ದುವು.

"ಬಂದೂಕು ಹೋಗಿದೆ, ಮಾಸ್ತರ್!" ಕುಗ್ಗಿದ ದನಿಯಲ್ಲಿ ರಾಮಜಿ ಯಿಂದ ಉತ್ತರ ಬಂದಿತು. ಆ ಉತ್ತರದ ಕೊನೆಯ ಅಕ್ಷರ ಮುಗಿಯುವ ಪೂರ್ವದಲ್ಲಿಯೆ ರಾಮಜಿಯ ಕೆನ್ನೆಯ ಮೇಲೆ 'ರಪ್ ರಪ್' ಎಂದು ಎರ ಡೇಟು ಬಿದ್ದಿದ್ದುವು. ಹವಾಲದಾರ ಪೆಟ್ಟು ಹಾಕುವಾಗ, ತನ್ನ ಮುಕ್ಕಾಲು ಪಾಲು ಶಕ್ತಿಯನ್ನೆಲ್ಲ ಉಪಯೋಗಿಸಿದ್ದ. ರಾಮಜಿ ಕುಕ್ಕರು ಬಿದ್ದ. ಅರಿವಿನ ಎಳೆ ಕತ್ತರಿಸಿದಹಾಗಾಯ್ತು; ಕೂಡಲೆ ಅವನಿಗೆ ಮೂರ್ಛೆ ಬಂದಂತಾಯಿತು.

"ಗಣಪತರಾವ್, ಕಲ್ಲಪ್ಪಾ ಅವನು ಹಾಗೇ ಬಿದ್ದಿರಲಿ. ಅವನಿ ಗೇನೂ ಆಗುವುದಿಲ್ಲ! ನೀವು ಇಬ್ಬರೂ ಪಹರಾಕ್ಕೆ ನಿಲ್ರಿ. ಬಂದೂ ಕಿನ ತಪಾಸಣೆಯ ಕೆಲಸಾ ನಾನು ನೋಡ್ತೇನೆ! ರಾಮಜಿ ಎದ್ದಮೇಲೆ, ಅವನ ಟೋಪಿ ಮತ್ತು ಬಕ್ಕಲ್ ಕಸಿದುಕೊಂಡು ಅವನನ್ನು ಹೊರಗೆ ನಿಲ್ಲಿ ಸಿರಿ! ಅವನು ಫರಾರಿ ಆದಾನು, ಹುಷಾರ್! ಮಾಸ್ತರ್, ನೀವು ಅಂಜ ಬೇಡ್ರಿ ಒಂದು ಬಂದೂಕು ಹೋದರೇನಾಯ್ತು? ನಾವು ನಾಲ್ಕು ಜನ ಇದ್ದೇವೆ; ಅದೇನು ಬಂದರೂ ನಾವು ನೋಡಿಕೊಳ್ಳೇವೆ!"

ಗಣಪತರಾವ ಮತ್ತು ಕಲ್ಲಪ್ಪ ಬಂದೂಕನ್ನು ಹೆಗಲಮೇಲೇರಿಸಿ ಹವಾಲದಾರನಿಗೆ ಸೆಲ್ಯೂಟು ಕೊಟ್ಟು, ಪಹರಾಕ್ಕೆ ನಿಂತರು. ಬಂದೂಕು

ಕೈಯಲ್ಲಿ ಟಾರ್ಚು ಹಿಡಿದುಕೊಂಡು ಹೊರಬಿದ್ದ. ಸ್ಟೇಶನ್ ಮಾಸ್ತರರು ಮಾತ್ರ ಮಂಕು ಹಿಡಿದವರಂತೆ ಉಪ್ಪುಕ್ಕೆ ನಿಂತು ಬಿಟ್ಟರು !

ಕೆಲಹೊತ್ತಿನ ಮೇಲೆ ರಾಮುಜಿ ಸ್ತೂರ್ತಿ ತಿಳಿದೆದ್ದ. ಅವನಿಗೆ ಹವಾಲದಾರನ ಅಪ್ಪಣೆ ತಿಳಿಸಲಾಯಿತು. ಅವನು ಹೊರಗಡೆ ಬಂದು, ಗೋಡೆಗೆ ಆತು ಕಲ್ಲಿನಂತೆ ಕುಳಿತುಬಿಟ್ಟ.

ಬೆಳಗಾಯಿತು ರಾಮುಜಿ ಅದೇ ಜಾಗದಲ್ಲಿ ಹಾಗೆಯೆ ಕುಳಿತಿದ್ದ. ಪಹರಾ ನಡೆದಿತ್ತು. ಹವಾಲದಾರ ಇನ್ನೂ ತನ್ನ ತಂಬೂದಲ್ಲಿ ಮಲಗಿದ್ದ. ಲಕ್ಕಿ ನಿದ್ರೆಯಿಂದೆದ್ದು ರಾತ್ರಿ ನಡಪದ್ದನ್ನೆಲ್ಲ ನೆನೆಯುತ್ತ ಕುಳಿತಿದ್ದಳು. ಅವಳಲ್ಲಿಯೂ ಎದ್ದು ಓಡಾಡುವಷ್ಟು ಚೇತನವಿರಲಿಲ್ಲ.

ಬಂದೂಕು ಕಳೆದು ಹೋದ ಸುದ್ದಿಯನ್ನು ಎಷ್ಟು ಗುಪ್ತವಾಗಿಡಬೇಕೆಂದರೂ, ಅದು ಕೆಲವು ಜನರಿಗಾದರೂ ತಿಳಿಯದೆ ಹೋಗಲಿಲ್ಲ. ಸುದ್ದಿ ತಿಳಿದವರು ಒಂದು ಒಂದು ರಾಮುಜಿಯನ್ನು ನೋಡಿ ಹೋಗುತ್ತಿದ್ದರು. ಗಾಡಿಗಳು ಬರು-ಹೋಗುವುದು ನಡೆಯಿತು. ದೊಡ್ಡ ಮಾಸ್ತರರು ಬಂದು ತಮ್ಮ ಕೆಲಸಕ್ಕೆ ತೊಡಗಿದರು. ಹವಾಲದಾರನೊಡನೆ ಆಲೋಚನೆ ಮಾಡದೆ ಅವರು ರಿಪೋರ್ಟು ಮಾಡುವ ಹಾಗಿರಲಿಲ್ಲ. ಹವಾಲದಾರನೋ ಮಲಗಿ ಬಿಟ್ಟಿದ್ದ. ದೊಡ್ಡ ಮಾಸ್ತರರಿಗೆ ಸಮಾಧಾನವಾಗಲಿಲ್ಲ. ಕೊನೆಗೆ ಅವರೇ ತಂಬೂದ ವರೆಗೆ ಹೋಗಿ ಅವನನ್ನು ಎಚ್ಚರಿಸಿದರು.

"ಮುಂದೆ ಏನು ಮಾಡೋದು ? ನಾನಂತೂ **ಡಿ. ಟಿ ಎಸ್**. ಗೆ ಈ ಸಂಗತಿಯನ್ನು ತಿಳಿಸಲೇಬೇಕು. ನಿಮ್ಮ ಡಿಪಾರ್ಟಮೆಂಟಿನ ವಿಷಯ ನೀವು ನೋಡಿಕೊಳ್ಳಿ !"

"ಈವೊತ್ತು ಸಾಯಂಕಾಲದವರೆಗೆ ನೋಡೋಣ; ಎಲ್ಲಿಯೂ ತಪಾಸ ಹತ್ತದಿದ್ದರೆ ಆಮೇಲೆ ನೀವೂ ರಿಪೋರ್ಟು ಮಾಡಬಹುದು, ನಾನೂ ಮಾಡ್ತೇನೆ !"

"ಹೌದ್ರೀ, ಈಗ ರಿಪೋರ್ಟು ಮಾಡದಿದ್ದರೆ ನಾವು ತಪ್ಪಿನೊಳಗೆ ಬರಬಹುದು ! ಈಗ ರಿಪೋರ್ಟು ಕಳಿಸಿ ಆಮೇಲೆ ತಪಾಸಣಿ ನಡೆಯಿಸಬಹುದು ! ನಿಮ್ಮ ತಪಾಸಣಿಯೇನು ವರ್ಷಗಟ್ಲೆ ನಡಿಯೋ ಕೆಲಸ! ಹೋದ ಬಂದೂಕು ಸಿಗುವುದು ಇನ್ನು ಎಂಥಾ ಮಾತೊ!"

"ಮಾಸ್ತರ್ರೆ, ಬಂದೂಕು ಹೋದದ್ದು ನಮ್ಮದು ! ಹೋದರೆ ನಮ್ಮ ತಲೆ ಹೋಗ್ತದೆಯಾಗಲಿ ನಿಮ್ಮದೇನೂ ಹೋಗುವುದಿಲ್ಲ ! ರಿಪೋರ್ಟು ಬರೆದು ಇಟ್ಟಿರ್ರಿ ! ಏನೇ ಆದರೂ, ಇವೊತ್ತು ಸಾಯಂಕಾಲದೊಳಗಾಗಿ ಕಳಿಸುವುದೇ ಆದರೆ ಕಳಿಸಿ ಬಿಡೋಣ! ಬಂದೂಕು ಹೋದದ್ದು ಹ್ಯಾಗೆ, ಎಷ್ಟು ಗಂಟೆಗೆ, ಮುಂತಾದ ತಪಸೀಲನ್ನು ಅನುಕೂಲದಂತೆ ಹೆಚ್ಚು-ಕಡಿಮೆ ಮಾಡಿಕೊಂಡು ರಿಪೋರ್ಟಿನಲ್ಲಿ ತಿಳಿಸಬಹುದು ! ಒಮ್ಮೆಲೆ ಅವಸರ ಮಾಡಬೇಡ್ರಿ !"

ಹವಾಲದಾರನಿಗೆ ಎದುರು ಹೋಗುವ ಧೈರ್ಯ ಮಾಸ್ತರರಿಗಾಗ ಲಿಲ್ಲ. 'ಪೋಲೀಸರ ಕೆಲಸ, ವಿರುದ್ಧ ಕಟ್ಟಿಕೊಂಡು ಫಲವಿಲ್ಲ, ಅಡವಿ ಯಲ್ಲಿ ಅವರದೇ ನಮಗೆ ಧೈರ್ಯ, ಏನಾದದ್ದಾಗಲಿ !' ಎಂದು ದೈವದ ಮೇಲೆ ಭಾರ ಹಾಕಿ "ಆಯಿತು, ಅದೇನು ಮಾಡ್ತಿರೋ ಮಾಡ್ರಿ! " ಎಂದು ಹೇಳಿ, ಮಾಸ್ತರರು ಮರಳಿ ಬಂದುಬಿಟ್ಟರು.

ಲಕ್ಕಿ ಹೊರಗೆ ಬಂದು ನಿಂತು ಸುತ್ತಲೂ ನೋಡಿದಳು. ರಾಮಜಿ ಆಫೀಸಿನ ಹತ್ತಿರ ಗಿಡದ ಕೆಳಗೆ ಒಬ್ಬನೆ ಬಕ್ಕನಿತ್ತಿಯಿಂದ ಕುಳಿತಿದ್ದ. ಒಬ್ಬ ಪೋಲೀಸು ಪಹರಾ ಮಾಡುತ್ತಿದ್ದ. ಆಕೆ ಮತ್ತೆ ಒಳಗೆ ಬಂದಳು. ಮೈಮೇಲೆ ಬಾಸಳಿ ಮೂಡಿದ ಭಾಗವೆಲ್ಲ ಮುಟ್ಟಿದರೆ ನೋಯುತ್ತಿತ್ತು. ಅತ್ತು ಅತ್ತು ಕಣ್ಣು ದಪ್ಪಗಾಗಿದ್ದುವು. "ನಿರ್ವಾಣಿ, ಹೋಗಿ ಅಲ್ಲಿ ಕುಂತೈತಿ ! ಡ್ಯೂಟಿ ಇಲ್ಲದಿದ್ದರ ಮನ್ಯಾಗ ಬಂದು ಕುಂಡ್ರಾಕೇನು ಬ್ಯಾನೇ ಇಂವಗ? ಅನ್ನೆಲ್ಲಾ ಸೂರ್ಯಾಡಿಬಿಟ್ಟೈತಿ !ತಾಅರs ತಿಂದದ್ದಲ್ಲ, ಹಾಂಗ ಅರs ಇಟ್ಟದ್ದಲ್ಲ! ಯಾತಕ್ಕೊಂದೂ ಬಡಿಯೋದೊಂದು ಕಲತೈತಿ ಮಂಗ! ಇರೋತನಕ ಬಡೀತೈತಿ. ನಾ ಸತ್ತಮ್ಯಾಲ ಯಾರ್ನ ಬಡೀತೈತಿ? ಹೊಟ್ಯಾಗ ಕೂಸೈತೀ ಅಂತ ಇರೋದು; ಇಲ್ಲದಿದ್ದರ ಎಂದೋ ಹೋಗ್ತಿದ್ದೆ ಬಾಂವೀ ಕೆರೀ ಪಾಲಾಗಿ ! ಕೂಳಿಗೆ ಇವತ್ತಾದರೂ ಬರ್ತೈತೋ ಏನು ಹಾಂಗs ಕುಂಡ್ರತೈತೋ ಅಲ್ಲೇ! ರೊಟ್ಟಿ ಅಂತು ಸುಟ್ಟಿದ್ದೇನಿ; ತಿಂದರ ತಿನಲಿ, ಇಲ್ಲದಿದ್ದರ ಉಪಾಸ ಸಾಯಲಿ !" ಎಂದು ಏನೇನೊ ಬಾಯಲ್ಲಿ ಒಟ ಗುಟ್ಟುತ್ತ ಲಕ್ಕಿ ಕಸಗುಡಿಸತೊಡಗಿದಳು.

ಮಧ್ಯಾಹ್ನ ಮೀರಿಹೋಯಿತು. ಲಕ್ಕಿಯ ಅಡಿಗೆ ಆಯಿತು. ಆದರೂ ರಾಮುಜಿ ಬರಲಿಲ್ಲ. ಅವಳಿಗೆ ರಾಮುಜಿಯನ್ನು ಬಿಟ್ಟು ಉಣ್ಣಲು ಮನಸ್ಸಾಗದು, ಹವಾಲದಾರನ ಡೇರಾದ ಹತ್ತಿರ ಬಂದಳು. ಬುದ್ದಪ್ಪ ಎದುರಿಗೆ ಒಂದು ಫೋಟೋ ಇಟ್ಟುಕೊಂಡು ಮಡಿಯಿಂದ ಜಪ ಮಾಡುತ್ತ ಕುಳಿತಿದ್ದ. ಲಕ್ಕಿ ಕೆಲಹೊತ್ತು ಸುಮ್ಮನೆ ನಿಂತುಕೊಂಡಳು. ಬುದ್ದಪ್ಪನ ಜಪ ಮುಗಿಯಿತು. ಫೋಟೋಕ್ಕೆ ಕೈಮುಗಿದು, ಜಪಮಾಲೆ ಚೀಲದಲ್ಲಿರಿಸಿ ಅದನ್ನು ತೆಗೆದಿಡುವಾಗ, ಲಕ್ಕಿ ನಿಂತದ್ದು ಆತನ ದೃಷ್ಟಿಗೆ ಬಿತ್ತು.

"ಏನು ಕೆಲಸವಿತ್ತು?"

"ಇನ್ನೂ ಬಂದಿಲ್ಲ ಅಲ್ಲೇ ಕುಂತಾನು! ಉಣ್ಣಾಕ ಕಳಿಸ್ರಿ!"

"ಖಬರದಾರ್, ಇವತ್ತು ಅಂವಗ ಕೂಳು ಹಾಕೋಹಾಂಗಿಲ್ಲ! ತನ್ನ ಸೊಕ್ಕಿನಿಂದ ಬಂದೂಕು ಕಳಕೊಂಡ. ಇನ್ನು ಅವನ್ನ ಕೆಲಸದಿಂದಲೂ ತಗೀತಾರೆ. ಜೇಲಿಗೂ ಕಳಿಸ್ತಾರೆ! ಯಾಕೆ ಹೀಗಾಯ್ತು ಗೊತ್ತಿದೆಯೇನ್ನಿನಗೆ?"

"ಹೌದೆಪ್ಪಾ; ನಂದss ತಪ್ಪೈತೆ ಅದರಾಗ! ನಾ ಅಂವ ಬಂದಾಗ ಮುನ್ಯಾಗಿದ್ದು, ಉಣ್ಣಾಕ ಹಾಕಲಿಲ್ಲ! ಏನು ಸಿಕ್ಷಾ ಮಾಡೋದು ನನಗ ಮಾಡ್ರಿ! ರಾತ್ರಿ ಕೂಳು ತಿನದss ಕೆಲಸಕ್ಕ ನಿಂತ; ಹೀಂಗಾತು!"

"ಈಗ ನಮ್ಮ ಕೈಯಾಗೇನೂ ಇಲ್ಲ; ಮ್ಯಾಲಿನವರು ಏನು ಮಾಡ್ತಾರೋ ಮಾಡಲಿ! ಏನಾದರೂ ಇವತ್ತು ಸಂಜೀತನಕ ಅಂವಗ ಕೂಳಿಲ್ಲ. ಹಾಗೇ ಕೂಡಬೇಕಂವ! ನೀನು ಹೋಗು! ನಿನಗೂ ಬುದ್ಧಿಯಿಲ್ಲ, ಅಂವಗೂ ಬುದ್ಧಿಯಿಲ್ಲ!"

ಬುದ್ದಪ್ಪ ಎದ್ದು ತಂಬುವಿನಲ್ಲಿ ಹೋದ. ಲಕ್ಕಿ ಮರಳಿ ಮನೆಗೆ ಬಂದಳು.

ಗಾಡಿಗಳು ಬಂದು ಹೋದವು. ಪಹರಾ ಬದಲಾದುವು. ಊಟ ಮಾಡುವವರು ಎರಡೆರಡು ಸಲ ಉಂಡರು. ರಾಮುಜಿ ಮತ್ತು ಲಕ್ಕಿಯರ ತುತ್ತಿನ ಚೀಲಗಳು ತೆರವು ಬಿದ್ದುವು—ಹಾಗೇ ತೆರವಾಗಿದ್ದುವು. ಹನಿ ನೀರು ಕೂಡ ಅವುಗಳಲ್ಲಿ ಹೋಗಿರಲಿಲ್ಲ. ಇಳಿಹೊತ್ತಿನ ತಂಗಾಳಿಗೆ

ರಾಮುಜಿ ಕುಳಿತಲ್ಲಿಯೇ ನಿದ್ದೆ ಹೋದ. ಲಕ್ಕಿಯೂ ತನ್ನ ಕೋಣೆಯಲ್ಲಿ ಮಲಗಿಬಿಟ್ಟಳು.

ಸಾಯಂಕಾಲವಾಯಿತು, ದೀಪ ಹತ್ತಿದವು. ಹವಾಲದಾರ್ ತಂಬು ವಿನಿಂದ ಹೊರಬಿದ್ದು ಆಫೀಸಿಗೆ ಬಂದ.

"ಏನು ಹವಾಲದಾರರೇ, ರಿಪೋರ್ಟಿನ ವಿಷಯ ಏನು ಮಾಡೋದು ? ನಾನು ಅದಕ್ಕಾಗಿ ಕಾದಿದ್ದೇನೆ," ದೊಡ್ಡ ಮಾಸ್ತರರು ಅಂದರು.

' ಆಗಲಿ ಈಗ ಹೇಳ್ತೇನೆ, ' ಎಂದು ಹವಾಲ್ದಾರ ಹೊರಗೆ ಬಂದು, 'ರಾಮುಜಿ,' ಎಂದು ಕೂಗಿದ. ರಾಮುಜಿ ಎದುರಿಗೆ ಬಂದು ನಿಂತ.

"ನೀವು ಇಂದು ಬೆಳತನಕ ಪಹರಾ ಮಾಡಬೇಕು ! ನನ್ನ ಬಂದೂಕು ಕೊಡತೇನೆ; ನಿನ್ನಿನ ಹಾಗೆ ಇವೊತ್ತೂ ಆದರೆ ನನ್ನನ್ನ ಮತ್ತು ನಿಮ್ಮನ್ನ ಇಬ್ಬರನ್ನೂ ಗಲ್ಲಿಗೇರಿಸತ್ತಾರ ! " ಎಂದು ಹೇಳಿ, ರಾಮುಜಿಯಿಂದ ಉತ್ತ ರದ ಅಪೇಕ್ಷೆ ಮಾಡದೆ ತಂಬುವಿಗೆ ಹೋಗಿ, ಬಂದೂಕನ್ನು ತಂದು ರಾಮು ಜಿಯ ಕೈಯಲ್ಲಿ ಕೊಟ್ಟ. ಯಾರೂ ಮಾತನಾಡಲಿಲ್ಲ 'ನಾನು ಈಗ ಬರ್ತೇನೆ' ಎಂದವನೇ ಹವಾಲದಾರ ಮತ್ತೆ ತನ್ನ ತಂಬುವಿನ ಕಡೆಗೆ ನಡೆದ

ಹವಾಲದಾರನ ಈ ನಡತೆ ಯಾರಿಗೂ ಅರ್ಥವಾಗಲಿಲ್ಲ. ರಾಮುಜಿ ಅವನ ಅಪ್ಪಣೆಯನ್ನು ಮನ್ನಿಸಿ ಪಹರಾಕ್ಕೆ ನಿಂತ. ಮಾಸ್ತರರು ದಿಙ್ಮೂಢ ರಾಗಿ, ಹಣೆಗೆ ಕೈಹಚ್ಚಿಕೊಂಡು, ತೆಪ್ಪಗೆ ಕುಳಿತು ಬಿಟ್ಟರು.

ರಾಮುಜಿ ನಿಂತು ಪಹರಾ ಮಾಡುವ ಸ್ಥಳದಲ್ಲಿ ಸಾಕಷ್ಟು ಬೆಳಕಿರ ಲಿಲ್ಲ; ಪೂರ ಕತ್ತಲೂ ಇರಲಿಲ್ಲ. ಆಫೀಸಿನೊಳಗಿನ ದೀಪದ ಬೆಳಕು ತಿಳಿ ಯಾಗಿ ಹರಿದಿತ್ತು. ಬಂದೂಕು ಕೈಯಲ್ಲಿ ಬಂದ ಮೇಲೆ, ರಾಮುಜಿಗೆ ತನ್ನ ಅಂತಃಕರಣದ ಮೇಲೆ ಯಾರೋ ಮೆತ್ತಗೆ ಕೈಯಾಡಿಸಿದ ಹಾಗಾಯಿತು. ನಾಲ್ಕೆಂಟು ಸಲ ಬಂದೂಕಿನ ಮೇಲೆ ಕೈಯಾಡಿಸಿದ. ಅದರ ನಡುವನ್ನು ಮುಟ್ಟಿ ನೋಡಿದ, ಹೊಟ್ಟೆ ಹಿಡಿದು ನೋಡಿದ, ಪಟ್ಟಿ ಹಿಡಿದು ಅಲ್ಲಾಡಿ ಸಿದ, ಕುದುರೆಯನ್ನು ತಟ್ಟಿದ, ಅದರ ಬಾಯಹತ್ತಿರ ಬೆರಳೆಳೆದ. ಹಾಗೆ ಮಾಡಿದ ಹಾಗೆಲ್ಲಾ ಅವನಿಗೆ ಒಂದು ಅನುಕೂಲ ಸಂವೇದನೆಯ ಅನು

ಭವ ಬರತೊಡಗಿತು. ಗಂಡ-ಹೆಂಡರಿಗೆ ಹೇಗೆ ಒಬ್ಬರೊಬ್ಬರ ಮೈಯ ಸ್ಪರ್ಶದ ಬೆಡಗು ಕಾಣದೆಯೂ ತಿಳಿಯುವುದೋ ಹಾಗೆ ಅವನಿಗೆ ಆ ಬಂದೂಕಿನ ಸ್ಪರ್ಶ ತನ್ನ ಬಂದೂಕಿನ ಅನುಭವವನ್ನೇ ಕೊಡತೊಡಗಿತು. ಅದನ್ನೆತ್ತಿ ಕಣ್ಣೆದುರಿಗೆ ಹಿಡಿದ. ಅವನಿಗೇನೋ ಸಂಶಯ ಬರತೊಡಗಿತು. ಆಫೀಸಿನಲ್ಲಿ ಬಂದ, ಅದನ್ನು ಬೆಳಕಿಗೆ ಹಿಡಿದು ನೋಡಿದ. ಅವನ ಮುಖ ಒಮ್ಮೆಲೆ ಅರಳಿತು. ಅಷ್ಟರಲ್ಲಿಯೆ ಹವಾಲದಾರನ ಸವಾರಿ ಟಾರ್ಚ್ ಕೈಯಲ್ಲಿ ಹಿಡಿದು ಒಳಗೆ ಕಾಲಿಟ್ಟಿತು. ರಾಮುಜಿ ಸೆಲ್ಯೂಟು ಕೊಟ್ಟು, ಉಕ್ಕಿ ಬರುವ ಆನಂದವನ್ನು ಪ್ರಯತ್ನದಿಂದ ಬಿಗಿಹಿಡಿದು ನುಡಿದ:

"ಮಾಸ್ತರ್, ಇದು ನನ್ನ ಬಂದೂಕು !"

"ವಾಃ ಪಟ್ಯಾ, ನನ್ನ ಬಂದೂಕನ್ನು ಕೊಟ್ಟದ್ದರ ಉಪಕಾರ ತೀರಿಸ್ತೀರೇನು ?"

"ಇಲ್ಲ ಮಾಸ್ತರ, ನನ್ನ ಬಂದೂಕೇ ಇದು ! ಹಗಲೂ ರಾತ್ರಿ ನನ್ನ ಕೈಯಲ್ಲಿ ಆಡಿದ್ದಿದು. ಇಂಥ ಪಟ್ಟಾ ನನ್ನ ಬಂದೂಕಿಗೇ ಇರೋದು; ಇಷ್ಟಾಗಿ ಈ ನಂಬರು ನನ್ನ ಬಂದೂಕಿನದೆ !"

ಹವಾಲದಾರ ರಾಮುಜಿಯ ತಲೆಗೆ ಒಂದೇಟು ಮುಟ್ಟಿಸಿ ನಗುತ್ತ ನುಡಿದ. "ಬೇರೆಯವರ ಕೈಯಲ್ಲಿ ಬಂದೂಕು ಹೋಗಿದ್ರೆ ನಿಮ್ಮ ಗತಿಯೇನಾಗ್ತಿತ್ತು ? ಇನ್ನು ಮುಂದೆ ಹುಷಾರ, ಡ್ಯೂಟಿ ಇದ್ದಾಗ ನಿದ್ದೆ ಮಾಡಬೇಡ್ರಿ ! ನಿದ್ದೆ ಮಾಡುವಾಗ ಕೂಡ ಡ್ಯೂಟಿಯನ್ನು ಮರೆಯದೆ ಇರುವ ದಿವಸಗಳಿವು ! ಇರಲಿ, ಹೆಂಡತಿಯನ್ನು ಮತ್ತೆ ಹೀಗೆಂದು ಹೊಡೆಯಬೇಡ್ರಿ ! ಹೊಡೆದದ್ದಕ್ಕೇ ನಿಮಗೆ ದೇವರು ಹೀಗೆ ಶಿಕ್ಷೆ ಕೊಟ್ಟದ್ದು ! ಅದೊ, ಅಲ್ಲಿ ನಿಮ್ಮ ಹೆಂಡತಿ ನಿಂತಿದ್ದಾಳೆ, ಹೋಗಿ ಹೊಟ್ಟೆತುಂಬ ಊಟ ಮಾಡ್ರಿ; ಇಂದು ರಾತ್ರಿ ನಿಮಗೆ ಪಹಾರಾ ಮಾಫ್ !"

ರಾಮುಜಿ ಹವಾಲದಾರನ ಪಾದದ ಮೇಲೆ ತಲೆಯಿಟ್ಟು ಅದನ್ನು ತನ್ನ ಕಂಬನಿಗಳಿಂದ ತೋಯಿಸಿಬಿಟ್ಟ.

"ನೀವೂ ನನ್ನ ಜತೆಗೆ ಉಣ್ಣಾಕ ಬರಬೇಕು ಮಾಸ್ತರ್," ರಾಮುಜಿ ದೈನ್ಯಭಾವದಿಂದ ನುಡಿದ.

"ಬಂದೂಕು ಕೊಟ್ಟದ್ದಕ್ಕೆ ಬಕ್ಷಿಸೇನ್ನನಗ ?"

"ಅಲ್ಲ ಮಾಸ್ತರ್, ನೀವು ಇಂದು ನಮ್ಮಲ್ಲಿ ಉಂಡರೆ ನಮಗೆ ಸಂತೋಷ!"

ಇಬ್ಬರೂ ಮನೆಗೆ ಬಂದು ಊಟಕ್ಕೆ ಕುಳಿತರು. ಲಕ್ಕಿ ಅಂದು ಹೊಸ ಮಾವಿನಕಾಯಿ ಚಟ್ಟಣಿ ಅರೆದಿದ್ದಳು.

ರೊಟ್ಟಿಯ ತುಣುಕಿಗೆ ಚಟ್ಟಣಿಯನ್ನು ಸವರಿ ಅದನ್ನು ಬಾಯಲ್ಲಿ ಸೇರಿಸುತ್ತ ಬುದ್ದಪ್ಪ ಹೇಳಿದ— "ಲಕ್ಕವ್ವ, ಇಂಥ ಹಿಂಡೀ ನಾನು ಹುಟ್ಟಿದ ಮ್ಯಾಲೆ ತಿಂದಿದ್ದಿಲ್ಲ. ನಿನ್ನ ಕೈಯಡಿಗೆ ಬಲು ಸವಿ!"

"ಅದರಾಗ ಮಾಸ್ತರ್, ಮಾವಿನಕಾಯಿ ಹಿಂಡೀ ಮಾಡಬೇಕು, ನಮ್ಮ ಲಕ್ಕೀನs!" ರಾಮಜಿ ಲಕ್ಕಿಯ ಕಡೆಗೆ ನೋಡಿ ನಗುತ್ತ ನುಡಿದ. ಲಕ್ಕಿಯ ಕಣ್ಣುಗಳಿಂದ ಆನಂದಾಶ್ರುಗಳು ಹೊರಚಿಮ್ಮಿದುವು.

---

# ಜಟಕಾ ಸಾಬಿ

"ಚಾಮರಾಜಪೇಟೆ ೧ನೇ ಕ್ರಾಸ್! ಏನ್ಸಾಬು ಬಾಡಿಗೆ?"

"ಒಂದು ರೂಪಾಯಿ ಸಾಮಿ!"

ಪ್ರಶ್ನೆ ಕೇಳಿದವನು ಪೂರ್ತಿ ಸೂಟಿನಲ್ಲಿದ್ದ; ಅವನ ಜೊತೆಗಿದ್ದವನೂ ಅದೇ ವೇಷದಲ್ಲಿದ್ದ. ಸೂಟು ಎಂದರೆ ಸಾದಾ ಚೆಕ್ಕಿನ ಸೂಟು. ಅವರ ಮುಖ—ಅವರ ವೇಷ ನೋಡಿದರೆ, ಕಚೇರಿಯಲ್ಲೊ ಕಂಪನಿಯಲ್ಲೊ ಗುಮಾಸ್ತರಾಗಿರಬೇಕು ಎನಿಸುವುದು. ನಿಜವೂ ಅವರು ಮಿಲಿಟರಿ ಎಂಜಿನಿಯರಿಂಗ್ ಖಾತೆಯಲ್ಲಿ ಗುಮಾಸ್ತರೇ ಆಗಿದ್ದರು. ಬೆಂಗಳೂರಿಗೆ ಬಂದು ಕೆಲವು ವರ್ಷಗಳಾಗಿದ್ದರೂ, ಬೆಂಗಳೂರ ಯಾವ ವಿಷಯವೂ ಅವರಿಗೆ ಸರಿಬರುತ್ತಿರಲಿಲ್ಲ. ಮನೆಗಳ ಕೊರತೆ, ಹೊಟೆಲುಗಳಲ್ಲಿಯ ಗಲಾಟೆ,

ಧಾನ್ಯದ ಅಭಾವ, ಬಸ್ಸಿನ ಅನನುಕೂಲ—ಇವುಗಳ ಜೊತೆಗೆ ಅಲ್ಲಿ ಮಿಕ್ಕ ಯಾವ ಪದಾರ್ಥವೂ ಬೇಕಾದಾಗ ದೊರೆಯುವ ಪರಿಸ್ಥಿತಿ ಇರಲಿಲ್ಲ, ದೊರೆತರೂ ಅಗ್ಗವಾಗಿ ದೊರೆಯುತ್ತಿರಲಿಲ್ಲ. ಅಗ್ಗವಾಗಿ ದೊರೆಯುವ ಪದಾರ್ಥವೆಂದರೆ ಅಲ್ಲಿ ಮಾತೊಂದೆ! ಆದರೆ ಈ ಹೊತ್ತು ಅದೂ ಅವರಿಗೆ ದೊರೆಯಲಿಲ್ಲ. ಒಂದು ರೂಪಾಯಿ ಬಾಡಿಗೆ ಕೇಳಿದ ಜಟಕಾದವನು, ಬಾಯಿತುಂಬ ಮಾತನಾಡಿಯಾದರೂ ಬಾಡಿಗೆ ಹಿಡಿಯಬೇಡವೆ? ಅದಾವುದನ್ನೂ ಅವನು ಮಾಡಲಿಲ್ಲ. 'ಒಂದು ರೂಪಾಯಿ ಸಾಮಿ' ಎಂದಿಷ್ಟೇ ನುಡಿದು, ಎದುರಿನ ಅಂಗಡಿಗೆ ಹೋಗಿ, ಬೀಡಿ ಹೊತ್ತಿಸಿ, ಮೂಗಿನ ಎರಡೂ ಸೊಳ್ಳೆಗಳಿಂದ ಹೊಗೆ ಬಿಡುತ್ತ ನಿಂತುಕೊಂಡ.

"ಎಷ್ಟು ಸೊಕ್ಕು ನೋಡಿದೆಯಾ ಇವನಿಗೆ? ನಮಗೀಗ ಜಟಕಾ ಬೇಕು; ಈ ಮೂರು ಕಾಸಿನ ಮುಟ್ಠಾಳ ಎಷ್ಟೇ ಏರಿ ಕುಳಿತರೂ ಇವನನ್ನು ಆಶ್ರಯಿಸಲೆ ಬೇಕು" ಪ್ರಾರಂಭದಲ್ಲಿ ಪ್ರಶ್ನೆ ಮಾಡಿದವನು ಜೊತೆಗಾರನಿಗೆ ಹೇಳಿದ.

"ಒಂದೇ ಜಟಕಾ ಇದೆ; ಸುಮ್ಮಗೆ ಕೇಳಿದ ಬಾಡಿಗೆ ಕೊಡ್ತಾರೆ ಎಂದು ಅವನಿಗೆ....!" ಇನ್ನೊಬ್ಬನೆಂದ.

"ಬಾರಯ್ಯಾ ಇಲ್ಲಿ!"

ಜಟಕಾಸಾಬಿ ಎದುರು ಬಂದು ನಿಂತ. ಅವನು ಬಾಯಿಂದ ಬೀಡಿಯ ಹೊಗೆಯನ್ನು ಬಿಡುತ್ತಲೆ ಕೇಳಿದ:

"ಏನು ಸಾಮಿ!"

"ಏನಯ್ಯಾ ಹೀಗೆ ಕೇಳಿದರೆ? ನಾಚಿಕೆ ಬರೋದಿಲ್ಲವೆ?"

"ಕಷ್ಟಮಾಡಿ ತಿನ್ನೋಕೆ ನಾಚಿಕೆ ಯಾತಕ್ಕೆ ಸಾಮಿ? ನಾವೇನು ಪುಗಸಾಟೆ ಕೇಳ್ತಿವಾ?"

"ಅಲ್ಲವಯ್ಯಾ, ಇಲ್ಲಿಂದ ಚಾಮರಾಜಪೇಟೆಗೆ ಒಂದು ರೂಪಾಯಿಯೆ?"

"ಅಷ್ಟೇ ಸಾಮಿ!"

"ಸರಕಾರೀ ರೂಲ್ಸು ಎಷ್ಟಯ್ಯಾ—ಇರೋದು?"

"ನಿಮಗೆ ರೂಲ್ಸು ಬೇಕೋ, ಜಟಕಾ ಬೇಕೋ ಸಾಮಿ?"

"What an impertinent fellow this is? He must be punished blackguard"

' ಸಾಮಿ, ಈ ಇಂಗ್ಲೀಷ್ ಗಾಲಿಗಳ್ನ ಬಿಟ್‌ಬಿಡಿ! ಜಟಕಾದವನು ಅಂದರೆ ಏನು ತಿಳಿಬದ್ದೀರಾ ?"

"ಮತ್ತೇನಯ್ಯಾ, ಏನೋ ಮಹಾ ಮಾತಾಡ್ತಿಯಾ? ಬಾಡಿಗೆ ಹೊಡಿಯೋ ಜಟಕಾದವನಿಗೆ ಎಷ್ಟಯ್ಯಾ ಔದ್ಧತ್ಯ?"

"ಸರ್, ದುಬಾರಿ ಮಾತು ಬಳಸ ಬೇಡಿ! ಜೇಬಿನಲ್ಲಿ ರೂಪಾಯಿ ಇದ್ದರೆ ಹತ್ತಿ, ಜಟಕಾದಲ್ಲಿ! ಇಲ್ಲದಿದ್ದರೆ ನಿಮ್ಮ ಪಾಡಿಗೆ ನೀವು, ನಮ್ಮ ಪಾಡಿಗೆ ನಾವು!''

"ಹತ್ತಾಣೆ ನೋಡು; ಬರೋಹಾಗಿದ್ದರೆ ಬಾ!''

"ನನ್ನದು ಸಾಮಿ, ಒಂದೇ ಮಾತು—ಒಂದು ರೂಪಾಯಿ ಕೊಡ ಬೇಕು; ಜಟಕಾ ಹತ್ತಬೇಕು!"

ಆ ಹೊತ್ತಿಗೆ ಬೇರೊಂದು ಜಟಕಾ ಕಾಣಿಸಿಕೊಂಡಿತು; ಆ ಜಟಕಾ ದವನು ಬಂದರೆ ಇವನು ಬಾಡಿಗೆ ತಗ್ಗಿಸಬಹುದು ಎಂದು ಇವರಿಗೆ ಆಶೆ ತಲೆದೋರಿತು. ಆ ಜಟಕಾದವನು ಹತ್ತಿರಕ್ಕೆ ಬಂದ.

"ಬರ್ತೀಯೇನಯ್ಯಾ ಚಾಮರಾಜಪೇಟೆಗೆ?''

ಅವನು ಇವರ ಪ್ರಶ್ನೆಗೆ ಉತ್ತರ ಕೊಡದೆ, ಈ ಜಟಕಾದವನನ್ನೇ ಕೇಳಿದ:— "ಪೂಛೇ ಕ್ಯಾಜೀ ಭಾಡಾ ? "

"ಹೋ!"

ಅವನು ಜಟಕಾ ಓಡಿಸಿಕೊಂಡು ಮುಂದೆ ಹೊರಟೇ ಹೋದ.

"ಯಾಕಯ್ಯಾ ?"

"ಇಲ್ಲ ಸಾಮಿ, ಬೇರೆ ಬಾಡಿಗೆ ಐತೆ!"

ಇಬ್ಬರ ಮೋರೆಯೂ ಇಳಿಯಿತು. ಒಬ್ಬನೆಂದ: "ಬಾರೋ ನಡೀತಾ ಹೋಗೋಣ! ಅರ್ಧಗಂಟೆ ತಡ; ಆದರೆ ಆಯ್ತು!''

"ಏನಯ್ಯಾ? ಹನ್ನೆರಡಾಣೆ! ಬರ್ತೀಯಾ ಇಲ್ವೊ?"

"ಸಾಮಿ, ನನ್ನದ್ಯಾವಾಗ್ಲೂ ಒಂದೇ ಮಾತು! ಒಮ್ಮೆ ಬಾಡಿಗೆ ಹೇಳಿ ಬಿಟ್ಟಮ್ಯಾಲೆ ಎಂದೂ ಕಮ್ಮಿ ತಕ್ಕೊಳ್ಳೋಕಿಲ್ಲ! ದುಡ್ಡು ಕಮ್ಮಿ

ಇದ್ದರೆ ದಮಡೀನೂ ಕೊಡಬೇಡಿ; ಹಾಗೆ ಜಟಕಾ ತರ್‍ತೀನೆ !"

"ಎದೆಗುಂಡಿಗೆ ಗಟ್ಟಿ ಇದೆಯೇನಯ್ಯಾ ?"

"ಸಾಮಿ, ಮಾತಿಗೆ ತಪ್ಪಿದರೆ ಮುಸಲ್ಮಾನನೇ ಅಲ್ಲ ! ಜಿದ್ದಿಗೆ ಬಿದ್ದರೆ ಜಟಕಾ ಒಗೆದು ಬಿಡೋ ಸೂಳೇ ಮಗ ನಾನು ! ನಿಮ್ಮ ಒಂದು ರೂಪಾಯಿಗೆ ಅಂಜತೇನೇ ?"

"ರುಸ್ತುಮ್‍ನಯ್ಯಾ ನೀನು ! ಸರಿ ! ಹಾಗೇ ಕರೆದುಕೊಂಡು ಹೋಗು ! ನಮ್ಮ ರೂಪಾಯಿ ಉಳಿಯಿತು ! ತಕ್ಕೊಂಡು ಬಾ, ನಿನ್ನ ಜಟಕಾ !"

"ಮನೆಗೆ ಹೋದ ಮೇಲೆ ಬಾಡಿಗೆ ಕೊಟ್ಟರೆ ತಕ್ಕೊಳ್ಳೋಕ್ಕಿಲ್ಲ ಸಾಮಿ, ಇವಾಗ್ಲೇನೇ ಹೇಳಿಟ್ಟಿರ್‍ತೇನೆ !"

ಸಾಬಿ ಜಟಕಾದ ಹತ್ತಿರ ಹೋದ.

"This seems to be a crack, I say ! ನಡೆ ಜಯಾ, ಒಮ್ಮೆ ಬೇಗ ಮನೆ ಸೇರಿದರೆ ಬದುಕಿಕೊಂಡಿವಿ. " ಮೊದಲು ಮಾತಾಡಿದವನು ಇನ್ನೊಬ್ಬನಿಗೆ ಹೇಳಿದ. ಜಟಕಾ ಬಂದಿತು. ಇಬ್ಬರೂ ಕುಳಿತರು ಸಾಬಿ ಮಾತಿಗೆ ಮೊದಲು ಮಾಡಿದ:

"ಸಾಮಿ, ನೀವು ಎಲ್ಲಿ ಕೆಲಸಕ್ಕಿರೋದು ? ನಮ್ಮ ಗೌರ್ಮೆಂಟಾ, ಇಲ್ಲಾ ಬ್ರಿಟಿಶ್ ಗೌರ್ಮೆಂಟಾ ?"

"ನಿಮ್ಮ ಗೌರ್ಮೆಂಟಾಗಿದ್ದರೆ ನಿನಗೆ ಗೊತ್ತಿರೋದಿಲ್ವೇನಯ್ಯಾ?"

"ಸಾಮಿ, ಹಾಸ್ಯಮಾಡಬೇಡಿ ! ನಾನೂನು ಥರ್ಡ್‍ಫಾರ್ಮ್ ಓದಿದೇನೆ ಮೊದಲಿಗೆ, ಸಾಮಿ. ನಾವೂ ನೆಟ್ಟಿಗೆ ಉಂಡು ತಿಂದು ಇದ್ದವರು ! ನಮ್ಮಣ್ಣ ಕೋಳೀ ಪಂದ್ಯಾ ಆಡಿ ಎಲ್ಲ ಹಾಳು ಮಾಡಿದ ಸಾಮಿ ! ಈಗ ಈ ಜಟಕಾ ನನ್ನ ಪಾಲಿಗೆ ಬಂದೈತೆ !"

"ದಿನಾಲು ಎಷ್ಟು ಸಿಕ್ಕುತ್ತಯ್ಯಾ... ಇದರಲ್ಲಿ ?"

"ಎಷ್ಟು ಬಂದರೂ ನಮ್ಮ ಮುಸಲ್ಮಾನರ ಕಸಾಲಿ ತಪ್ಪೋದಿಲ್ಲ ಸಾಮಿ !"

"ಯಾಕಯ್ಯಾ, ಅದು ಹಾಗೆ?"

ಗಾಗೆ ಕೊಡೊ ದೇವರು ಒಬ್ಬನೆ--ನಮ್ಮ ಅಲ್ಲಾ ! ಎಲ್ಲಾರಿಗೂ ಕೊಡಬೇಕೆಂದರೆ ಎಷ್ಟೆಂದು ಕೊಟ್ಟಾನು ಸಾಮಿ ! ನಿಮ್ಮ ಹಿಂದೂ ಜನರಾಗ ಸಾವಿರಾರು ದೇವರು ! ಸಾವಿರ ಕೈಯಿಂದ ನಿಮಗೆ ಕೊಡ್ತಾ ಇರ್ತಾರೆ !"

"ನಿನ್ನ Philosophy ಚೆನ್ನಾಗಿದೆ ! ಇರಲಿ. ಎಷ್ಟು— ನಾಲ್ಕೈದು ರೂಪಾಯಿ ಸಂಪಾದಿಸ್ತೀಯಾ ನಿತ್ಯವೂ ?"

'ಎಷ್ಟೇ ಸಂಪಾದಿಸಿದರೂ ಬೆಳಗಾದರೆ ೫ ರೂಪಾಯಿ ಕೊಡಬೇಕಲ್ಲ ಸಾಮಿ, ಜಟಕಾದ ಮಾಲೀಕನಿಗೆ ? ಇದರ ಮೇಲೆ ಬಂದದ್ದು ನನ್ನದು !'

"ಅಲ್ಲಯ್ಯಾ ಸ್ವಂತ ಜಟಕಾ ಇಲ್ಲದವನು ನೀನು ಎಷ್ಟು ಹಾರಾಡ್ತೀಯಾ ? ಈಗ ನಮ್ಮ ಕಡಿಂದ ಸಿಕ್ಕೋ ಬಾಡಿಗೆ ತಕ್ಕೊಳ್ಳೋದು ಬಿಟ್ಟು, ನೀನೇನದನ್ನ ಕೈಯಿಂದ ಹಾಕ್ತೀಯಾ ?"

"ಸಾಮಿ. ನಿಮ್ಮ—ಕಡಿಂದಾನೇ ಒಂದಕ್ಕೆರಡು ತಕ್ಕೊಳ್ಳೊ ಧೈರ್ಯ ಐತೆ ನನಗೆ ! ಆದರೆ ಜುಲುಮಿ ಜಬರದಸ್ತಿ ಇಲ್ಲ, ಖುಷಿಯಿಂದ ತಗೋತೇನೆ, ನೋಡತಾ ಇರಿ ತಾವೇ !"

"ನಿನಗಿದ್ದ ಧೈರ್ಯ ನಮಗಿಲ್ಲ !"

"ಇದಕ್ಕೆ ಧೈರ್ಯ ಬೇಕಾಗಿಲ್ಲ ಸಾಮಿ, ಮನಸು ಬೇಕು !"

"ನಿಜಾನಪ್ಪಾ ಅದು !"

ಮಾತು ಅಲ್ಲಿಗೇ ನಿಂತಿತು—ಜಯ ಆಫೀಸಿಗೆ ಸಂಬಂಧಿಸಿದ ಮಾತನ್ನು ತೆಗೆದ—ವಿಷಯ ಬೇರೆ ಹೊರಟಿತು. ಅವರಿಬ್ಬರೇ ಮಾತಿನಲ್ಲಿ ತೊಡಗಿದರು.

ರಂಗನ ಮನೆಯ ಹತ್ತಿರದ ಚೌಕು ಬಂದಿತು.

" ನಾನು ಇಲ್ಲಿಗೇ ಸಾಮಿ ನಿಲ್ಲಿಸೋದು; ಮುಂದೆ ಬರಾಕಿಲ್ಲ !" ಜಟಕಾದವನನ್ನು ಮತ್ತೆ ಕೆಣಕುವ ಮನಸ್ಸು ಅವರಿಗಿರಲಿಲ್ಲ.

"ಹಾಂ; ಇದು ಹಿಡಿ, ತಕರಾರು ಬೇಡ !" ರಂಗ ಒಂದು ರೂಪಾಯಿ ತೆಗೆದು ಸಾಬಿಗೆ ಕೊಡಲು ಹೋದ.

"ಆ ಮಾತಾಗೋದಿಲ್ಲ, ಸಾಮಿ, ತಕ್ಕೊಳ್ಳೋಕಿಲ್ಲಾ ಅಂದರೆ ತಕ್ಕೊಳ್ಳೋಕೇ ಇಲ್ಲ!"

ರಂಗ ರೂಪಾಯಿಯನ್ನು ಜಟಕಾದಲ್ಲಿ ಎಸೆದ. ಅದನ್ನೆತ್ತಿದವನೇ ಸಾಬಿ ರಂಗನೆದುರಿಗೆ ಬೀಸಾಡಿ, ಜಟಕಾ ಏರಿದವನೇ ನಡೆದೇ ಬಿಟ್ಟ! ಇಬ್ಬರೂ ಬೆಪ್ಪನಂತೆ ನಿಂತು ಬಿಟ್ಟರು.

* * * *

ರಂಗ ಮತ್ತು ಜಯು ಹೈಸ್ಕೂಲ್ ಕಾಲದಿಂದಲೂ ಗೆಳೆಯರು. **ಬಿ. ಎಸ್‌ಸಿ**, ಪರೀಕ್ಷೆ ಪುಣೆಯಲ್ಲಿ ಪಾಸ ಮಾಡಿದ ಮೇಲೆ, ಒಂದೇ ಕಾಲಕ್ಕೆ ಕೆಲಸದಲ್ಲಿ ಸೇರಿದರು. ಬೆಂಗಳೂರಿಗೆ ಬಂದ ಸ್ವಲ್ಪ ದಿನಗಳಲ್ಲಿಯೇ ಜಯು ಮದರಾಸಿಗೆ ವರ್ಗವಾಗಿ ಹೋದ. ರಂಗ ಒಬ್ಬನೇ ಬೆಂಗಳೂರಲ್ಲಿ ಉಳಿದ. ಮೇಲೆ ವಿವರಿಸಿದ ಜಟ್ಕಾದ ಸಂಗತಿ ಜರುಗಿದಾಗ, ಜಯು ಒಂದು ವಾರದ ರಜೆಯ ಮೇಲೆ ಬಂದಿದ್ದ. ಹೊರಡುವಾಗ ಅವನು ರಂಗನಿಗೂ ಮದರಾಸಿಗೆ ಬಂದು ಹೋಗಲಿಕ್ಕೆ ಆಗ್ರಹದಿಂದ ಹೇಳಿ ಹೋದ.

ಕೆಲವು ದಿನ ಕಳೆದುವು. ರಂಗನಿಗೆ ಜಯುನಿಂದ ಪತ್ರ ಬಂದಿತು: 'ನಾಲ್ಕು ದಿನದ ಬಿಡುವು ದೊರಕಿಸಿ, ಆದಷ್ಟು ಬೇಗ ಬಂದು ಹೋಗಬೇಕು' ಎಂದು. ಆಗ ರಂಗನ ಹೆಂಡತಿ ತುಂಬಿದ ಬಸುರಿ. ಪ್ರಸವಕ್ಕೆ ಅವಧಿ ಅವರ ಲೆಕ್ಕದಿಂದ ಹೆಚ್ಚು ದಿನ ಇರಲಿಲ್ಲವಾದರೂ, ಇನ್ನೂ ಎರಡು ವಾರಗಳಾದರೂ ಹೋಗಬಹುದೆಂದು ಗಂಡ– ಹೆಂಡತಿ ಲೆಕ್ಕ ಹಾಕಿದ್ದರು. ಜಯುನ ಪತ್ರ ಬಂದ ಎರಡು ದಿನಗಳಲ್ಲಿಯೇ ರಂಗ ರಜೆಯನ್ನು ಪಡೆದು ಮದರಾಸಿಗೆ ಹೊರಟು ಬಿಟ್ಟ. ಹೊರಡುವಾಗ ಸಿಂಧುವಿಗೆ ಹೇಳಿದ: "ಹಾಗೆ ಏನಾದರೂ ಸಂದರ್ಭ ಒದಗಿದರೆ, ನೆರೆಮನೆಯ ಸರೋಜಮ್ಮನವರಿಗೆ ತತ್‌ಕ್ಷಣ ತಿಳಿಸು! ಅಂತಹ ಸಂದರ್ಭವೇ ಬರಲಾರದು; ಆದರೂ ಹೇಳಿತ್ತೇನೆ.--ನಾನೇನೋ ಇಂದಿನಿಂದ ನಾಲ್ಕನೆಯ ದಿವಸ, ತಪ್ಪದೇ ಇಲ್ಲಿ ಇರುತ್ತೇನೆ!"

ರಂಗ ಮದರಾಸಿಗೆ ಹೋದ ಮೂರನೆಯ ದಿನ, ಸಿಂಧು ಸರೋಜಮ್ಮನ ಜೊತೆಗೆ ಸಿನೇಮಾ ನೋಡಿ ಬಂದಳು. ಬರುವಾಗ ಹೊಟ್ಟೆಯಲ್ಲಿ

ಒಮ್ಮೆರಡು ಸಲ ಒಂದು ತರದ ನೋವೆದ್ದಿತು. ಆ ದಿನ ಸರೋಜಮ್ಮನ ಮನೆಯಲ್ಲಿ ನಾಲ್ಕು ಒಡೆಗಳನ್ನು ಹೆಚ್ಚು ತಿಂದಿದ್ದಳು. ಇದ್ದರೆ ಅದರದೇ ನೋವು ಇರಬೇಕೆಂದು ಎಂದು ಕೊಂಡಳು. ಸರೋಜಮ್ಮನಿಗೆ ತಿಳಿಸುವ ಅಗತ್ಯ ಆಗ ಆಕೆಗೆ ತೋರಲಿಲ್ಲ. ಆದರೆ ಮನೆಗೆ ಬಂದ ಮೇಲೆ ಬೇನೆ ಹೆಚ್ಚಾಯಿತು. ಬರುಬರುತ್ತ ಅದರ ಬಾಧೆಯನ್ನು ಸಹಿಸುವುದು ಆಕೆಗೆ ಅಸಾಧ್ಯವೆನಿಸತೊಡಗಿತು.

ರಾತ್ರಿಯ ಒಂದು ಗಂಟೆಯ ಸುಮಾರು; ಮಳೆ ಸುರಿದು ಅದೇ ನಿಂತಿತ್ತು. ಆದರೂ ಮೋಡಗಳು ಹಿಂಡು—ಹಿಂಡಾಗಿ ಬಂದೇ ಬರುತ್ತಿದ್ದುವು ಕ್ಷಣಕ್ಷಣಕ್ಕೂ ಮಳೆಯ ಅಂಜಿಕೆ ಹೆಚ್ಚುತ್ತಲೇ ಇತ್ತು.

ಇಂತಹ ಹೊತ್ತು ಜಟಕಾ ಸಾಬಿಗಳಿಗೆ ಬಲು ಖುಷಿಯ ಹೊತ್ತು. ಎಲ್ಲರೂ ಥಿಯೆಟರುಗಳ ಬಳಿ ನುಗ್ಗಿದ್ದರು. ನಗರದ ಜಟಕಾಗಳೆಲ್ಲ ಅಲ್ಲೇ ನೆರೆದ ಹಾಗಿತ್ತು ಚಾಮುರಾಜಪೇಟೆಯ ೧ನೆಯ ಕ್ರಾಸಿನಲ್ಲಿ ಒಂದು ಜಟಕಾ ಗಾಡಿಯೂ ಇರಲಿಲ್ಲ. ಸರೋಜಮ್ಮನ ಮುಪ್ಪಿನ ಮಾವ ಜಟಕಾಗಾಡಿಗಾಗಿ ಪಾಪ ಬೀದಿ ಬೀದಿ ಅಲೆಯುತ್ತಿದ್ದರು ಅವರು ಮನೆಯನ್ನು ಬಿಟ್ಟು, ಒಂದು ಗಂಟೆಯ ಮೇಲಾಗಿತ್ತು. ಸಿಂಧುವಿನ ಅವಸ್ಥೆ ಏನಾಗಿರಬಹುದು ಎಂಬುದನ್ನು ಅವರು ಊಹಿಸದಾದರು. ಅವರು ಮನೆಯಿಂದ ಹೊರಡುವಾಗಲೆ, ಸಿಂಧುವಿನ ಬೇನೆಯ ಕಳವಳ ನೋಡಿ ಸರೋಜಮ್ಮ ಗಾಬರಿಯಾಗಿದ್ದರು. ಮನೆಯಲ್ಲಿ ಸಿಂಧು ಒಬ್ಬಳೇ, ಗಂಡ ಬೇರೆ ಊರಲ್ಲಿಲ್ಲ. ತಾನೋ ವಿಧವೆ! ತನ್ನ ಮನೆಯಲ್ಲಿಯೂ ಗಂಡಸು ಎಂದರೆ ಮುದುಕ ಸೋದರ ಮಾವ! ತನ್ನ ಜೀರ್ಣದೇಹವನ್ನು ಎಳೆಯುತ್ತ, ಆಯಾಸವನ್ನು ಲೆಕ್ಕಿಸದೆ, ಅಂತಹ ಕಗ್ಗತ್ತಲೆಯಲ್ಲಿ ಆ ಮಾವ ಹೊರಟಿದ್ದ ಅಲೆಯುತ್ತ ಅಲೆಯುತ್ತ ಒಂದು ಚೌಕಿನ ಹತ್ತಿರ ಬಂದ; ಅಲ್ಲಿ ಒಂದು ಜಟಕಾ ನಿಂತದ್ದು ಅವನ ಕಣ್ಣಿಗೆ ಬಿತ್ತು "ಬರುವನೋ ಇಲ್ಲವೊ, ಬಂದರೂ ಬಾಡಿಗೆ ಏನು ಕೇಳುವನೋ!' ಎಂಬ ಸಂಶಯ—ನಿರಾಶೆಗಳಲ್ಲಿ ಮುದುಕ ಜಟಕಾದವನನ್ನು ಕೇಳಿದ:—

"ಏನಯ್ಯಾ, ಒಬ್ಬ ಹೆಣ್ಣು ಮಗಳನ್ನು ಹೆರಿಗೆ-ಆಸ್ಪತ್ರೆಗೆ ಸಾಗಿಸಬೇಕು—ಬಾಡಿಗೆ ಬರ್‍ತೀಯಾ ?"

"ಒತ್ತೀನಿ, ಎಲ್ಲಿಂದ ಸಾಮಿ ಕೊಡೋದು ?"

"ಚಾಮರಾಜಪೇಟೆ ಒಂಬನೇ ಕ್ರಾಸ್‌ನಿಂದ !"

"ನೋಡಿ ಸಾಮಿ, ಮಳೆಮಾರಿನ ಹೊತ್ತು ! ಅದೂ ಅಲ್ಲದೆ ಹೆಣ್ಣು ಮಗಳನ್ನು ಆಸ್ಪತ್ರೆಗೆ ಸಾಗಿಸಬೇಕು. ಆರು ರೂಪಾಯಿ ಆದರೆ ಒತ್ತೀನಿ !"

ಮುದುಕ ಲೆಕ್ಕ ಹಾಕಿದ್ದ: ಹೆಚ್ಚೆಂದರೆ ಅವನು ಒಂದು-ಒಂದೂವರೆ ರೂಪಾಯಿ ಕೇಳಬಹುದು ಎಂದು ಮುದುಕನ ಎಣಿಕೆಯಿಂದ ಇದು ಸ್ವಲ್ಪ ಮಟ್ಟಿಗೆ ಮೀರಿ ಹೋಯಿತು. 'ಜಟಕಾ ಸಾಬಿಗಳಂತಹ ದುಷ್ಟರೂ ಕಟುಕರೂ ಜಗತ್ತಿನಲ್ಲಿಯೆ ಬೇರೆ ಇರಲಾರರು !' ಎಂದು ಆತ ಮಿಡಿದು ಕೊಂಡರು 'ಇವರಲ್ಲಿ ಅಂತಃಕರಣ, ಮನುಷ್ಯತ್ವ, ಏನಾದರೂ ಇದೆಯೋ ? ದುಡ್ಡು ಸಂಪಾದಿಸುವ ಹೊತ್ತೇ ಇದು? ಒಂದು ಪ್ರಾಣ ಗಂಡಾಂತರ ದಲ್ಲಿದೆ ! ಸಂಕಟದಲ್ಲಿ ಸಿಕ್ಕವರ ಪ್ರಾಣ ಮೊದಲು ಉಳಿಸಬೇಕು ಎಂಬ ಭಾವನೆ ಇದೆಯೋ ಇವರಿಗೆ? ಇಂಥವರನ್ನು ಗುಂಡಿಕ್ಕಿ ಕೊಂದರೂ ದೋಷ ಬರಲಾರದು !' ಎಂದು ಏನೇನೋ ವಿಚಾರ ಅವರ ತಲೆಯಲ್ಲಿ ಬಂದು ಹೋಯಿತು. ಆದರೂ ಬಂದ ಸಿಟ್ಟನ್ನು ಒಳಗೆ ಹತ್ತಿಟ್ಟು, ಆರ್ಜವ ವೃತ್ತಿಯನ್ನು ಧ್ವನಿಯಲ್ಲಿ ತಂದುಕೊಂಡು ಮುದುಕ ಹೇಳಿದ:

"ಇದು ನೋಡು, ಹೆಣ್ಣು ಮಗಳು ಪಾಪ, ಸಂಕಟದಲ್ಲಿದ್ದಾಳೆ ! ಎರಡು ರೂಪಾಯಿ ಕೊಡ್ತೇನೆ; ಬಂದು ಬಿಡು ! ಇಂಥ ಹೊತ್ತಿನಲ್ಲಿ ಅನ್ಯಾಯ ದಿಂದ ಸಂಪಾದಿಸಿದರೂ ನಿನಗದು ದಕ್ಕಲಾರದು ! ನೀನು ಮಕ್ಕಳು–ಮರಿ ಹಾಕಿದವನಿದ್ದರೆ, ಇಂಥ ಕಷ್ಟ ನಿನಗೂ ಗೊತ್ತಿರಲು ಸಾಕು—"

"ನಮಗೆಲ್ಲ ಗೊತ್ತೈತೆ ಸಾಮಿ ! ಇಂತಾ ಮಳೇಲಿ ಬಾಡಿಗೆ ಹೊಡೆದು ನಾವೂನೂ ಬದುಕಬೇಕು ! ಆರು ರೂಪಾಯಿಗೆ ಕಡಿಮೆ ಆಗೋಕಿಲ್ಲ; ರೂಪಾಯಿಗೆ ಎರಡು ಸೇರು ಅಕ್ಕಿ, ಮೂರು ಸೇರು ಹುರಳಿ! ನಾವೇನು ತಿನ್ನೋಣ, ಕುದುರಿಗೇನು ಹಾಕೋಣ ಸಾಮಿ ?"

ಮುದುಕ ಸ್ವಲ್ಪ ಹೊತ್ತು ಏನೂ ತೋಚದೆ ನಿಂತ. ಬೇಗನೆ ಮನೆ ಸೇರಬೇಕೆಂಬ ಚಿಂತೆಯೊಂದು, ಆರು ರೂಪಾಯಿ ಬಾಡಿಗೆ ಕೇಳಿದನಲ್ಲಾ ಎಂಬ ಸಂತಾಪವೊಂದು; ಈ ಉಭಯ ಸಂಕಟದ ಮೂಲಕ ತೆರೆಯಲ್ಲಿ

ಚಿಕ್ಕ ತೆಂಗಿನಕಾಯಿಯಂತೆ ಮುದುಕನ ಅವಸ್ಥೆ ಆಯಿತು ಆಗಿನ ಒಂದೊಂದು ಕ್ಷಣವೂ ಮಹತ್ವವಿತ್ತು. ಆಗ ಮಡ್ಡಿನ ಮೋರೆ ನೋಡುವ ಹಾಗಿರಲಿಲ್ಲ. ಪ್ರಾಣ ಉಳಿಯರೆ ಸಾಕಾಗಿತ್ತು. ಆದರೂ ಸ್ವಲ್ಪ ಜಗ್ಗಾಡಿ ನೋಡೋಣ ಎಂದ. ಮುದುಕನಿಗೆ ಆಸೆಯುಂಟಾಯಿತು. 'ಸ್ವಲ್ಪ ಹೋದಹಾಗೆ ಮಾಡಿದರ ಕಡಿಮೆ ಬಾಡಿಗೆಗೆ ಬಂದರೂ ಬರಬಹುದು.' ಎಂದು ಆಲೋಚಿಸಿ, ಮುದುಕ ಮುಂದಕ್ಕೆ ಹೊರಟ ಆ ಚೌಕನ್ನು ದಾಟಿ ಒಂದು ಗಲ್ಲಿಗೆ ಬಂದ. ಅದೇ ಹೊತ್ತಿಗೆ ಒಂದು ಜಟಕಾ ಎದುರಿಗೆ ಕಾಣಿಸಿ ಕೊಂಡಿತು. ಅದು ಕೂಡ ಚೌಕಿನ ನಿಲ್ದಾಣಕ್ಕೇ ಹೊರಟಿತ್ತು. ಮುದುಕ ನಿಗೆ ಆಶೆಯು ಧೈರ್ಯ ಬಂದಿತು.

"ಬರ್ತೀಯೇನಯ್ಯಾ ?"

"ಎಲ್ಲಿಗೆ ಸಾಮಿ ?"

"ಒಬ್ಬ ಹೆಣ್ಣುಮಗಳನ್ನು ಹೆರಿಗೆ ಆಸ್ಪತ್ರೆಗೆ ಒಯ್ಯಬೇಕು ! ಆಕೆಯ ಗಂಡ ಊರಲ್ಲಿಲ್ಲ, ನಾವು ನೆರೆಮನೆಯವರು ! ಆಕೆಗೆ ನಾವೀಗ ಸಹಾಯ ಮಾಡಬೇಕು. ನೀನೂ ಅಷ್ಟು ಪುಣ್ಯಕಟ್ಟಿಕೊ ! ನೋಡು, ಏನು ಕೊಡ ಬೇಕು ಬಾಡಿಗೆ ? ಹೆಚ್ಚು ಕೇಳಬೇಡ !"

ಮೂರು ರೂಪಾಯಿ ಕೊಡಿ ಸಾಮಿ ! ನಿಮ್ಮ ಮನೆಯೆಲ್ಲಿ ?"

"ಚಾಮರಾಜಪೇಟೆ, ಒಂದನೆಯ ಕ್ರಾಸ್ !"

"ಸರಿ ಹತ್ತಿ; ಹೋಗೋಣ !"

ಮುದುಕನಿಗೆ ಈ ಬಾಡಿಗೆಯೂ ಹೆಚ್ಚೇ ಎನಿಸಿತು; ಆದರೆ ವಿಚಾ ರಕ್ಕೆ ಆಗ ಸಮಯವಿರಲಿಲ್ಲ. ಮುದುಕ ಜಟಕಾ ತಕ್ಕೊಂಡು ಮನೆಗೆ ಬಂದ.

ಮನೆಯಲ್ಲಿ ಅದೇನು ಗಾಬರಿ, ಅದೆಷ್ಟು ಗೊಂದಲ ! ಅವರ ಅವಸ್ಥೆ ಯನ್ನು ದೇವರೇ ಬಲ್ಲ ! ಸಿಂಧುವಿನ ಸ್ಥಿತಿ ಬಹಳ ಕಷ್ಟಕ್ಕಿಟ್ಟುಕೊಂಡಿತ್ತು. ಈ ಜಟಕಾ ಸಾಬಿ ಬಾರದೆ ಇನ್ನೊಬ್ಬರು ಯಾರಾದರೂ ಬಂದಿದ್ದರೆ, ಅವರು ಆಸ್ಪತ್ರೆಗೆ ಹೋಗುವ ಸಾಹಸವನ್ನೇ ಮಾಡುತ್ತಿರಲಿಲ್ಲವೇನೊ ! ಈ ನಮ್ಮ ಜಟಕಾ ಸಾಬಿ ಬಾಗಿಲಿನಲ್ಲಿ ಜಟಕಾ ನಿಲ್ಲಿಸಿ ಅವರು ಬರುವವರೆಗೆ ಸುಮ್ಮನೆ ಕೂಡಲಿಲ್ಲ; ಮುದುಕನ ಹಿಂದೆ ತಾನೂ ಒಳಗೆ ಬಂದ. ಸರೋಜ

ಮ್ಮನವರನ್ನು ಎಲ್ಲ ಸಮಾಚಾರ ವಿಚಾರಿಸಿ ತಿಳಿದುಕೊಂಡ; ಅವರಿಗೆ ಮನೆಯುವನಂತೆ ಧೈರ್ಯ ಹೇಳಿದ:

"ಅಮ್ಮಾ, ನೀವು ಗಾಬರಿಯಾಗಬೇಡಿ! ಆ ಯಮ್ಮಾಗೆ ಐದು ನಿಮಿಷದಲ್ಲಿ ಕರಕೊಂಡು ಹೋಗ್ತೀನೆ! ನೀವು ಆಯಮ್ಮನ ಸೀರೆ, ರವಿಕೆ, ಉಳಿದ ಬಟ್ಟೆ ತಕ್ಕೊಳ್ಳಿ. ಅವರು ಹತ್ತು ದಿನ ಆಸ್ಪತ್ರೆಯಲ್ಲಿರಬೇಕು. ಜಟಕಾದಲ್ಲಿ ಮೆತ್ತಗೆ ಹಾಸೋಕೆ ಏನಾದರೂ ಇದ್ದರೆ ಕೊಡಿ. ಚಳಿ! ಬೆಚ್ಚಗೆ ಹೊಚ್ಚಿರಿ ಆ ಯಮ್ಮಗೆ! ಕಷ್ಟದ ಹೊತ್ತು ಯಾರಿಗಾದರೂ ಬರೋದುಂಟಮ್ಮಾ! ನನಗೂ ತಂಗೀ-ತಾಯಿ ಇದ್ದಾರೆ. ಈ ಯಮ್ಮನೂ ನನಗೊಬ್ಬ ತಂಗಿ ಇದ್ದ ಹಾಗೆ!"

ಜಟಕಾ ಸಾಬಿಯ ಮಾತು ಅವರಿಗೆಷ್ಟೋ ಧೈರ್ಯ ಕೊಟ್ಟಿತು. ಸಾಬಿ ಒಂದು ಚಿಕ್ಕ ಹಾಸಿಗೆ ಮಾಡಿ ಜಟಕಾದಲ್ಲಿ ಹಾಕಿದ. ಮನೆಯ ಕಿಟಕಿಗಳನ್ನೆಲ್ಲ ಮುಚ್ಚಿದ ಸಾಮಾನುಗಳನ್ನೆಲ್ಲ ಸವರಿಸಿ ಹೊಂದಿಕೆಯಾಗಿಟ್ಟ. ಒಳಗಿನ ಬಾಗಿಲುಗಳನ್ನಿಕ್ಕಿ, ಬನ್ನಿ ತಾಯಿ, ಹೋಗೋಣ!, ಎಂದು ಸಿಂಧುವಿನ ಎದುರು ಬಂದು ನಿಂತ. ಸಿಂಧುವನ್ನು ತಂದು ಗಾಡಿಯಲ್ಲಿ ಕುಳ್ಳಿರಿಸಿದರು ಗಾಡಿ ಹೊರಟಿತು. ಸಾಬಿ ಗಾಡಿಯನ್ನು ಬಹು ಜಾಗರೂಕತೆಯಿಂದ—ಆದರೂ ಆದಷ್ಟು ಜಾಗ್ರತೆಯಾಗಿ--ತಂದ.

ಸಿಂಧುವನ್ನು ಡಾಕ್ಟರ ಸ್ವಾಧೀನಕ್ಕೆ ಒಪ್ಪಿಸಿ, ಸರೋಜಮ್ಮ ಮತ್ತು ಮುದುಕ ಆಸ್ಪತ್ರಿಯ ಹೊರಗೆ ಬರುವವರೆಗೆ, ಜಟಕಾ ಸಾಬಿ ಬಾಡಿಗೆಗಾಗಿ ಕಾದುಕೊಂಡೇ ಇದ್ದ. ಸಾಬಿಗೆ ಬಾಡಿಗೆ ಕೊಡದೆ ಹಾಗೇ ನಿಲ್ಲಿಸಿದ್ದೇ ಅವರಿಗೆ ಮೊದಲು ಲಕ್ಷ್ಯಕ್ಕೆ ಬರಲಿಲ್ಲ! ಸಾಬಿ ತಿಳಿದುಕೊಂಡ: 'ಮುದುಕ ಮರಳಿ ಮನೆಗೆ ಹೋಗಬಹುದು, ಅದಕ್ಕಾಗಿ ಜಟಕಾ ನಿಲ್ಲಿಸಿಕೊಂಡಿರಬೇಕು!' ಎಂದು. ಜಟಕಾ ಕಣ್ಣಿಗೆ ಬಿದ್ದ ಮೇಲೆ, ಸರೋಜಮ್ಮ ಮನಸ್ಸಿನಲ್ಲಿಯೆ ವ್ಯಥೆ ಪಟ್ಟುಕೊಂಡು, ಬಾಡಿಗೆ ಕೊಡಲು ಮುದುಕನಿಗೆ ಹೇಳಿದಳು. ಆದರೆ ಪಾಪ, ಬರುವ ಗೊಂದಲದಲ್ಲಿ ಮುದುಕ ದುಡ್ಡಿನ ಪಾಕೀಟನ್ನು ಮನೆಯಲ್ಲಿ ಮರೆತು ಬಂದಿದ್ದ.

"ನೀನು ಪರ್ಸ್‌ನ್ನೇ ಹ್ಯಾಗೆ ಮರೆತು ಬಂದೆ?"

"ಏನೋವಮ್ಮಾ, ಪರ್ಸ್ನ ತರಬೇಕೆಂದು ಪೆಟ್ಟಿಗೆಯಿಂದ ತೆಗೆದು ಹೊರಗಿಟ್ಟವನು, ಹಾಗೇ ಮರೆತು ಬಂದು ಬಿಟ್ಟೆ. ಇತ್ತೀಚೆಗೆ ಹೀಗೇ ಆಗುತ್ತೆ. ಎಲ್ಲ ಅಭ್ರಮ-ಸುಭ್ರಮ! ಅದರಲ್ಲಿ ಗಾಬರಿಯಲ್ಲಿ ಯಾವುದೂ ತೋಚಲಿಲ್ಲ!"

"ಈಗ ಹ್ಯಾಗೆ ಮಾಡೋದು? ಇಲ್ಲಿಂತೂ ಯಾರೂ ಗುರ್ತಿನವರಿಲ್ಲ!"

"ಜಟಕಾ ಸಾಬಿಗೆ ನಾಳೆ ಬಾ ಅಂತ ಹೇಳಿದರೆ?"

"ಹ್ಯಾಗೆ ಹೇಳೋದಪ್ಪಾ? ಪಾಪ, ಸಾಬಿಯಾದರೂ ನಮಗಾಗಿ ಎಷ್ಟೊಂದು ತೊಂದರೆ ಪಟ್ಟುಕೊಂಡ! ಬಾಡಿಗೆ ತಕ್ಕೊಂಡರೂ ಹೀಗೆ ಪ್ರಸಂಗಕ್ಕೆ ಅನುಕೂಲವಾಗೋದು ಹೇಳು!"

"ಮತ್ತೇನು ಮಾಡಂತೀಯಾ?"

ಇವರಾಡುವ ಒಂದೆರಡು ಮಾತು—ಸಾಬಿಯ ಕಿವಿಯ ಮೇಲೆ ಬಿದ್ದುವು. ಸಾಬಿ ಹತ್ತಿರ ಒಂದು ಕೇಳಿದ—"ಏನು ಅಮ್ಮನವರೆ, ಅದು?"

'ಏನಿಲ್ಲಪ್ಪಾ, ಮುದುಕರು ಪಾಪ, ಬರುವಾಗ ಗಾಬರಿಪಟ್ಟು ಕೊಂಡು, ಹೊರಗೆ ಇಟ್ಟ ಪರ್ಸ್ನ ತಾರದೆ ಹಾಗೇ ಬಿಟ್ಟು ಬಂದಿದ್ದಾರೆ. ಹ್ಯಾಗೆ ಮಾಡೋಣಾ....ಅಂತ!"

"ಪರವಾ ಇಲ್ಲವಮ್ಮಾ, ಗಾಬರಿಗೆ ಯಾರಿಗಾದರೂ ಹೀಗೇ ಆಗೋದುಂಟು! ನಾನು ಮನೆಗೆ ಬಂದು ತಕ್ಕೊಂಡು ಹೋಗ್ತೀನೆ. ನೀವೇನು ಯೋಚನೆ ಮಾಡಬೇಡಿ! ನಾಳೆ ಆಯಮ್ಮನ ಗಂಡನ್ನ ತಂತೀ ಕಳಿಸಿ ಕರೆಯಿಸಿಕೊಳ್ಳಮ್ಮಾ; ನಾನು ಬರ್‍ತೀನೆ!"

ಇಷ್ಟು ನುಡಿದವನೇ ಸಾಬಿ ಅಲ್ಲಿ ಒಂದು ಕ್ಷಣ ಕೂಡ ನಿಲ್ಲದೆ, 'ಚಲ್ ಬೇಟಾ' ಎಂದು ತನ್ನ ಕುದುರೆಗೆ ಹೇಳಿ, ಜಟಕಾ ಏರಿ, ಕತ್ತಲಲ್ಲಿ ಕಾಣದಂತಾದ.

* * * *

ಸಿಂಧು ಗಂಡು ಮಗುವನ್ನು ಹೆತ್ತಳು—ಹತ್ತು ದಿನ ಆಸ್ಪತ್ರೆಯಲ್ಲಿದ್ದು ಮನೆಗೆ ಮರಳಿ ಬಂದಳು. ಅವಳು ಹಡೆದ ಮಾರನೆಯ ದಿನವೆ, ರಂಗ ಮದರಾಸಿನಿಂದ ಬಂದು ಬಿಟ್ಟಿದ್ದ.

ಇಂದು ಅವನ ಮನೆಯಲ್ಲಿ ತೊಟ್ಟಿಲು ಸಂಭ್ರಮ! ಸಿಂಧುವಿನ ತಾಯಿ-ಅಣ್ಣಂದಿರು ಸಮಾರಂಭಕ್ಕೆ ಬಂದಿದ್ದರು. ರಂಗ ಆಫೀಸಿಗೆ ರಜೆಗೆ ಬರೆದು, ಅವರೊಡನೆ ಚಕ್ಕಂದದಲ್ಲಿ ಕುಳಿತಿದ್ದ, ಅವನ ಮಗು ತೊಟ್ಟಿಲಲ್ಲಿ ಮಲಗಿತ್ತು. ಸಿಂಧು ಮಂಚದ ಮೇಲೆ ಒರಗಿಕೊಂಡು, ಸಾಯಂಕಾಲಕ್ಕೆ ಬೇಕಾಗುವ ಕೂಸಿನ ಅಂಗಿ-ಟೊಪ್ಪಿಗೆಗಳನ್ನು ಸಿದ್ಧಪಡಿಸುತ್ತಿದ್ದಳು. ತಲೆಬಾಗಿಲಲ್ಲಿ ಯಾರೋ—'ಸಾಮಿ' ಎಂದು ಕೂಗಿದರು. ರಂಗ ಎದ್ದು ಕೋಣೆಯ ಹೊರಗೆ ಬಂದು ನೋಡುತ್ತಾನೆ—ಎದುರಿಗೆ ಬಾಡಿಗೆ ರೂಪಾಯಿ ಬಿಟ್ಟು ಹೋದ ಜಟಕಾ ಸಾಬಿ!

"ಏನಯ್ಯಾ ಬಂದೆ?"

"ಬಾಡಿಗೆ ಸಾಮಿ!"

"ಆಗ ಕೊಡೋದಕ್ಕೆ ಬಂದರೆ ಬೇಡಾ ಅಂದವನು, ಈಗ ಕೇಳೋದಕ್ಕೆ ನಾಚಿಕೆ ಬರೋದಿಲ್ಲವೆ? ದಿನ ಹೋದವರೆ ನಿನ್ನ ಬಾಡಿಗೆ ರೂಪಾಯಿ ಈಯುತ್ತೇ—ಅಂತ ತಿಳಿದಿದ್ದೀಯಾ?"

"ಆ ಬಾಡಿಗೆ ಅಲ್ಲ ಸಾಮಿ. ಬೇರೆ ಬಾಡಿಗೆ ಐತೆ! ಒಳಗೆ ಅಮ್ಮಾ ಅವರಿಗೆ ಗೊತ್ತು; ಅವರಿಗೆ ತಿಳಿಸಿ ಅವರೆಲ್ಲಾ ಕೊಡ್ತಾರೆ!"

ಸಾಬಿಯ ದನಿಯ ಗುರುತು ಸಿಂಧುವಿಗೆ ಹತ್ತಿತು. ಕೂಡಲೆ ಅವಳು ಹೊರಗೆ ಬಂದಳು. ಸರೋಜಮ್ಮನೂ ಅದೇ ಹೊತ್ತಿಗೆ ಬಂದಳು.

'ಅಮ್ಮಾ, ಸುಖವಾಗಿದ್ದೀರಾ?' ಸಾಬಿ ಕೇಳಿದ.

"ಸುಖವಾಗಿದ್ದೇನಪ್ಪಾ! ಎಲ್ಲಾ ನಿನ್ನ ಪುಣ್ಯ!"

ಸಿಂಧು ಕೃತಜ್ಞತಾಭಾವದಿಂದ ನುಡಿದಳು.

"ನನ್ನ ಪುಣ್ಯ ಏನು ಬಂತು ತಾಯಿ! ದೇವರು ಕಾಯೋದು ಹೊತ್ತು!"

"ಬಾ, ಕೂತ್ಕೊಪ್ಪಾ ಇಲ್ಲಿ!"

ಸಾಬಿ ಕುಳಿತ; ರಂಗ ಮತ್ತು ಉಳಿದವರೆಲ್ಲರೂ ಆಶ್ಚರ್ಯದಿಂದ ಸಾಬಿಯನ್ನೇ ನೋಡುತ್ತಿದ್ದರು. ಸಿಂಧು 'ಅಂದಿನ ಜಟಕಾ ಸಾಬಿ ಇವನೆ!' ಎಂದು ಹೇಳಿದಳು. ಆ ಮಾತನ್ನು ಕೇಳಿ ಎಲ್ಲರಿಗಿಂತಲೂ ರಂಗನಿಗೆ ಸಾಬಿಯ ಬಗ್ಗೆ ಹೆಚ್ಚು ಆಶ್ಚರ್ಯವೂ ಆದರವೂ ಉಂಟಾದುವು; ಸಾಬಿಯಾದರೆ ಏನಾಯಿತು! ಅವನಿಗೂ ಅಂತಃಕರಣವಿಲ್ಲವೇ?

ನನಗೆ ಮೂರು ರೂಪಾಯಿ ಕೊಡಿ!' ಸಿಂಧು ರಂಗನನ್ನು ಕೇಳಿದಳು. ರಂಗ ಐದು ರೂಪಾಯಿಯ ಒಂದು ನೋಟನ್ನು ತೆಗೆದು ಅವಳ ಕೈಯಲ್ಲಿಟ್ಟು ಇದನ್ನು ಸಾಬಿಗೆ ಕೊಟ್ಟುಬಿಡು!' ಎಂದು ಹೇಳಿದ.

ಸಿಂಧು ತಾಂಬೂಲದಲ್ಲಿ ನೋಟನ್ನಿಟ್ಟು ಅದನ್ನು ಸಾಬಿಗೆ ಕೊಟ್ಟಳು. ಅದನ್ನು ತಕ್ಕೊಳ್ಳುತ್ತ ಸಾಬಿ ಹೇಳಿದ: "ಅಮ್ಮಾ, ನಿಮ್ಮ ಮಗೂನ ಸ್ವಲ್ಪ ನನ್ನ ಕಣ್ಣಿಗೆ ಹಾಕ್ತೀರಾ? ನೋಡಿ ಸಂತೋಷ ಪಡ್ತೇನೆ!"

ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನೆತ್ತಿ ಸರೋಜಮ್ಮ ಸಾಬಿಗೆ ತೋರಿಸಿದರು ಸಾಬಿಗೆ ಆಗ ಉಕ್ಕಿ ಬಂದ ಆನಂದವು ಮಾನವತೆಗೆ ಸಂಬಂಧಿಸಿದ ಆನಂದ! ಜಾತಿ-ಪಂಥದ ಪಡಿಯಚ್ಚಿನಲ್ಲಿ ಪಾಕ ಹೊಂದಿದ್ದಲ್ಲ ಅದು!

* * * *

ಈ ಮಾತು ಜರುಗಿ ಈಗ ಎಷ್ಟೋ ಕಾಲವಾದರೂ, ಸಾಬಿ ಅದನ್ನು ಈಗಲೂ ಒಳ್ಳೆಯ ಹುರುಪಿನಿಂದ ಹೇಳುತ್ತಿರುತ್ತಾನೆ! ಆದರೆ ಕೇಳುವವರಿಗೂ ಅಂತಹ ಸಹೃದಯತೆ ಬೇಕು! ಅದಿದ್ದರೆಯೆ ಇದಕ್ಕೆ ಸವಿ!

# ನೀಲಪ್ಪ

"ಬಾ, ನೀಲಪ್ಪಾ ಏನು ಬಂದೆ?"

"ಏನೋ ಬಂದೆ ರಾಯರ; ಒಡವನ ಸುಕದುಃಕ್ಕಾ ಹೇಳ್ಕೋಬೇಕು ಅನಿಸ್ತ್ಯು" ಎಂದು ನಮುಸ್ಕಾರ ಮಾಡಿ ನೀಲಪ್ಪ ನನ್ನೆದುರಿಗೆ ನೆಲದ ಮೇಲೆ ಕುಳಿತ. ನೀಲಪ್ಪ ಶ್ಯಾಮನ ಬಣ್ಣದ ಕಾರಖಾನೆಯೊಳಗಿನ ಮುಖ್ಯ ಕೆಲಸಗಾರ. ಅವನು ನನ್ನ ಮನೆಗೆ ಹೀಗೆ ಎಂದೂ ಬಂದಿರಲಿಲ್ಲ. ನಾನು ಶ್ಯಾಮನ ಗೆಳೆಯ ಎಂದು ಅವನಿಗೆ ಗೊತ್ತು. ಎಂದಾದರೂ ಶ್ಯಾಮನ ಜೊತೆಗೆ ನಾನು ಕಾರಖಾನೆಗೆ ಹೋದರೆ, ನೀಲಪ್ಪ ಮುಗುಳು ನಗೆ ನಕ್ಕು ಒಂದು ನಮುಸ್ಕಾರ ಹಾಕುತ್ತಿದ್ದನಷ್ಟೇ. ಇಂದು ಅವನು ನನ್ನ ಮನೆಗೆ ಬರಬೇಕಾದರೆ ವಿಶೇಷವೇನಾದರೂ ಇರಬಹುದು ಎನಿಸಿತು.

"ನಿನ್ನ ಧಣಿ ಏನಂತಾನ ? ನಿನ್ನ ಮೇಲೆ ಎಂದಿನಂತೆ ಅವನ ಪ್ರೀತಿ ಇರುವದಷ್ಟೇ ?"

"ಪ್ರೀತಿ— ಕೆಲಸಕ್ಕ ಬಾರದ ಪ್ರೀತಿ ರಾಯರs ! ನಾ ಹತ್ತು ವರ್ಷ ದಂವ ಇದ್ದಾಗ ಇವರ ಮನ್ಯಾಗ ಕೆಲಸಕ್ಕಿಂತೇನಿ. ಈಗ ನನಗ ಐವತ್ತರ ಮ್ಯಾಲಾಗಿದ್ದಾವು. ಒಂದಿನ ತಪ್ಪದ್ಹಾಂಗ ಇವರ ನೋಕರಿ ಮಾಡಿ ದೇನು. ಸತ್ತ ರಾವಸಾಬರು ನನ್ನ ಮಗನ್ಹಾಂಗ ಸಲವಿದರು. ಈ ಮಾರಾ ಯನೂ ನನ್ನ ಬಿಟ್ಟಿಲ್ಲ. ಅನ್ನಾ ಕೊಡತಾನು. ಆದರ ಮ್ಹಾ ಚಂಚಲ ಬುದ್ದಿ ರಾಯರ! ಗಳಿಗ್ಗೊಂದು ಮಾತಾಡ್ತಾನ. ಬಣ್ಣದ ಕಾರಕಾನಿ ತಗದು ಬಿಡಬೇಕೂ ಅಂತ ಆತನ ತಲ್ಯಾಗ ಹೊಕ್ಕೈತಿ. ಒಮ್ಮೆ ಟಿಪ್ಹಣಿ ಅಂಗಡಿ ಅಂತಾನ, ಒಮ್ಮೆ ಸಾಬಾಣ ಕಾರಕಾನಿ ಅಂತಾನ, ಒಮ್ಮೆ ಅದೇನೋ ಏಜೆಂಟ ಅಂತಾನ. 'ಹಿರೇರ ಕಾಲದಿಂದ ನಡದು ಬಂದ ಕಾರ ಕಾನಿ, ಅದನ್ನs ದೊಡ್ಡದು ಮಾಡಿ ನಡಸೋಣು ರಾವಸಾಬ್ ಅಂದರ ಆತಗ ಈ ಮಾತು ಹಿಡೀವಲ್ಲದು! ನೆಟ್ಟಗ ನಡಿಸಿದರ ಈ ಕಾರಕಾನ್ಯಾಗ ವರ್ಸಾ ಸಾವಿರಾರು ರೂಪಾಯಿ ಲಾಭಾ ಪಡೀಬಹುದು ರಾಯರ ! ಆತ ಸುಮ್ಮಾಕ ಬಂದು ಕಾರಕಾನ್ಯಾಗ ಕುಂತರ ಸಾಕು, ನಾ ಎಲ್ಲಾ

ಮಾಡ್ಕೊಂಡು ಹೋಗ್ತೇನಿ. ಅಂವಗ ಈ ಮಾತು ಹೇಳಾಕ ನನಗ ಧೈರ್ಯ ಇಲ್ಲ ಆತನ ಜಿಗದಾಟಕ್ಕ ಸುಮಾಕಿದ್ದು ಬಿಟ್ಟೇನು. 'ಕಾರಕಾನಿ ನಿಲ್ಲಸಬ್ಯಾಡ್ರಿ ದ್ಯಾವರೂ' ಅಂತ ನಾ ಒಂದು ಮಾತು ಆಡಿದ್ದಕ್ಕ ನನಮ್ಯಾಲ ನಿನ್ನೆ ಟರಾಪರಾ ಒದರಾಡಿ ಹೋದ. ಅಂವ ಒದರಾಡಿದ ಅಂತ ನನಗೇನು ಸಿಟ್ಟಿಲ್ಲ ಏನಾದರೂ ಅಂವ ನನಗ ಅನ್ನದಾತ. ನಾ ಆಳು ಅಂತ ಅಂವಗ ತಿಳ್ಯಾಕತ್ತಿಲ್ಲ. ಇವನ ಮುನ್ಯಾಗ ಎಲುಬು ಸವಿಸಿ ದುಡಿದೆ ನಾ ಇಟ್ಟ ನಂಬಿಗಿ, ಕೊಟ್ಟ ಇಸ್ವಾಸ ದೇವರಲ್ಲಿ ರುಜು ಐತಿ! ನಾ ಸತ್ತರೂ ಈತನ ಕಾಲಾಗs ಬಿದ್ದು ಸಾಯುಂವ! ಬ್ಯಾರೆ ಪರಪಂಚ ನನಗೇನೈತಿ ರಾಯರs? ಅರಜೀವಾದ ಮುದಿಕಿ ಒಂದೈತಿ ಅದೇನು, ಇಂದು ಮುನ್ಯಾಗ, ನಾಳೆ ಮಸಣದಾಗ."

ನೀಲಪ್ಪ ಇದನ್ನೆಲ್ಲ ಹೇಳುತ್ತಿರುವಾಗ, ನಾನು ವಿಚಾರಮಗ್ನನಾಗಿ ಸುಮ್ಮನೆ ಕೇಳುತ್ತಿದ್ದೆ. ಅವನ ಒಂದೊಂದು ಮಾತೂ ನನ್ನಲ್ಲಿ ಹಲಕೆಲವು ಕಲ್ಪನಾತರಂಗಗಳನ್ನುಂಟು ಮಾಡುತ್ತಿದ್ದವು. ಮಾತು ಮುಗಿಸುವಾಗ ಅವನ ಕಂಠ ಉಬ್ಬಿ ಕಣ್ಣು ನೀರೊಡೆದುವು.

"ನೀಲಪ್ಪಾ, ನೀನು ಹೇಳಿದ ಯಾವ ಮಾತೂ ನನಗೆ ಹೊಸದಲ್ಲದಿದ್ದರೂ ಅದರಿಂದ ನಿನ್ನ ಅಭಿಪ್ರಾಯ ನನಗೆ ತಿಳಿಯಿತು. ಶ್ಯಾಮಣ್ಣ ನನ್ನ ಮಾತು ಕೇಳ್ಯಾನು ಎಂದು ನನಗೆ ಭರವಸೆ ಇಲ್ಲ. ನಾನು ಹೇಳುವಷ್ಟು ಹೇಳುತ್ತೇನೆ ಆತನು ಹಟಿ ಎಂಬುದನ್ನ ನೀನೂ ಒಲ್ಲೆ. ಆದರೆ ನನಗೊಂದು ವಿಶ್ವಾಸ ಇದೆ— ಅಂವ ನಿನ್ನನ್ನೆಂದೂ ಕೆಲಸದಿಂದ ತೆಗೀಲಾರ. ಬಣ್ಣದ ಕಾರಖಾನೆಯ ವಿಷಯ ನಾನು ಹೇಳಿ ನೋಡ್ತೇನೆ!"

ನೀಲಪ್ಪ ಹೋದ ಮೇಲೆ ಎಷ್ಟೋ ಹೊತ್ತು ಶ್ಯಾಮನ ವಿಷಯವೇ ನನ್ನ ತಲೆಯಲ್ಲಿ ಸುಳಿಯುತ್ತಾ ಇತ್ತು ಹೆಂಡತಿ ಊಟಕ್ಕೆ ಎಬ್ಬಿಸಿದ ಮೇಲೆಯೇ ನನಗೆ ಹೊತ್ತಾಯಿತೆಂದು ಎಚ್ಚರ. ಒಳಗೆ ಹೋಗಿ ಎಲೆಯ ಮೇಲೆ ಕುಳಿತೆ. ಇನ್ನು ಊಟಕ್ಕೆ ಪ್ರಾರಂಭಿಸಬೇಕು, ಅಷ್ಟರಲ್ಲಿ ಹಿತ್ತಿಲ ಬಾಗಿಲಲ್ಲಿ ಶ್ಯಾಮನ ಕೂಗು ಕೇಳಿಸಿತು. ಈಕೆ ಹೋಗಿ ಬಾಗಿಲನ್ನು ತೆರೆದಳು. ಶ್ಯಾಮ ಬಂದು ನನ್ನ ಹತ್ತಿರ ಕುಳಿತ. ಈಕೆ ಶ್ಯಾಮನಿಗೂ ಊಟಕ್ಕೆ ಆಗ್ರಹಮಾಡಿದಳು. "ಹಾಕರಿ, ಇಲ್ಲೂ ಉಣತೇನ, ಮನೆಯ

ಲ್ಲಿಯೂ ಉಣತೇನೆ.'' ಎಂದ. ! ''ನಮ್ಮಲ್ಲಿ ಉಂಡದ್ದು ತಿಳಿದರೆ ಸಿಟ್ಟಾದಾರು ಅತ್ತಿಗೆಯವರು!" ಎಂದಳೀಕೆ. ''ಛೆ, ಛೆ, ಹಾಗೇನೂ ಇಲ್ಲ. ಈಗ ನನ್ನ ಮೇಲೆ ಬಹಳ ಪ್ರೀತಿ. ನಿಮಗಿನ್ನೊಂದು ಹೇಳೋದಿದೆ ಅತ್ತಿಗೆ ಈಗ ಎಷ್ಟೋ ತಿಂಗಳು ಬಸಿರು ! ತುಂಬಾ ಬಯಕೆ ಕಾರೋದು ತೆರವಿಲ್ಲ, ತಿಂಬೋದು ತೆರವಿಲ್ಲ! ನನ್ನನ್ನಷ್ಟು ತಿಂಬೋದು ಬಾಕಿ !'' ಎಂದು ಏನೇನೋ ಹೇಳುತ್ತಿದ್ದ. ನಾನು ನಡುವೇ ಅಂದೆ: 'ನೀನು ಇದನ್ನೇ ಹೇಳ್ಳಿಕ್ಕೆ ಬಂದಿದ್ಯೊ, ಮತ್ತೇನಾದರೂ ಕೆಲಸವಿತ್ತೊ?''

''ಇಲ್ಲೊ, ಕೆಲವು ವಿಷಯ ಮಾತಾಡೋದಿತ್ತು ಶ್ಯಾಮು'' ಅಂದ!

''ರಹಸ್ಯವಿದ್ದರೆ ಆ ಮೇಲೆ ಮಾತಾಡೋಣ."

''ಬೆಂಕೀ ಹಾಕಿತು ನಮ್ಮ ರಹಸ್ಯ! ಇಷ್ಟೆ: ಕಾರಖಾನೆ ನಿಲ್ಲಿಸಿ ಬಿಟ್ಟು, ಸಾಬೂನು ಎಣ್ಣೆ ತಯಾರು ಮಾಡಿ ಮಾರಾಟಕ್ಕೆ ಪೂರೈಸುವುದು, ಒಂದು ಸ್ವಂತ ಸ್ಟೇಷನರಿ ಅಂಗಡಿ ಪ್ರಾರಂಭ ಮಾಡುವದು ಅಂತ ನಿಶ್ಚಯಿಸಿದ್ದೇನೆ! "

''ಏನೇ ಮಾಡಿದರೂ ಒಂದು ತೂಕದಿಂದ ಮಾಡು. ಒಮ್ಮೆಲೆ ದುಡುಕ ಬೇಡ. ನಿನ್ನಿಂದ ಎಷ್ಟು ನೀಗುವದೊ ಅಷ್ಟಕ್ಕೇ ಕೈಹಾಕು; ಯಾವುದನ್ನು ಮಾಡಿದರೂ ನಾಲ್ಕು ದಿನ ಸ್ಥಿರವಾಗಿ ನಡೆಯಬೇಕು. ನೀಲಪ್ಪನ ವಿಷಯ ಏನು ವಿಚಾರ ಮಾಡಿದೆ ? ಬಣ್ಣದ ಕಾರಖಾನೆ ನಿಲ್ಲಿಸಿದರೆ ಅವನ ಗತಿ ?''

''ಅವನ ಸಲುವಾಗಿ ನಾನೇನು ಬಣ್ಣದ ಕಾರಖಾನೆ ನಡೆಸುವ ಹಾಗಿಲ್ಲ. ಕಾರಖಾನೆ ನಿಂತು ಹೋದ ಮೇಲೆ ಅಂಗಡಿಯಲ್ಲಿರುತ್ತಾನೆ. ಇಲ್ಲವೆ ನನ್ನ ಮನೆಯಲ್ಲಿದ್ದು ಬಿಡುತ್ತಾನೆ. ಅವನಿಗೊಂದು ಹೊಟ್ಟೆಗೆ ನಡೆಸಿದರಾಯಿತು. ನಾನು ಬಣ್ಣದ ಕಾರಖಾನೆ ನಿಲ್ಲಿಸುವದು ಅವನಿಗೆ ಒಪ್ಪಿಗೆಯಿಲ್ಲ. ನನ್ನ ಪ್ಲ್ಯಾನುಗಳು ಅವನ ಬುದ್ಧಿಗೆ ನಿಲುಕಲಾರವು ಬಣ್ಣ ಎದ್ದುವದೊಂದೇ ಅವನಿಗೆ ಗೊತ್ತು. ನಂಬಿಗಸ್ತ, ನನ್ನ ಮೇಲೆ ತುಂಬ ಅಭಿಮಾನ; ಎಲ್ಲ ನಿಜ. ಎಷ್ಟಾದರೂ ಆಳು, ಅವನ ಯೋಗ್ಯತೆ ಅಷ್ಟೇ ''

ನೀಲಪ್ಪ ಬಂದು ಹೋದ ಸಂಗತಿಯನ್ನು ಅವನ ಮುಂದೆ ಎತ್ತಲಿಲ್ಲ. ಅವನ ಅಭಿಪ್ರಾಯ ತಿಳಿದುಕೊಂಡು ಸುಮ್ಮನಾಗಿ ಬಿಟ್ಟ. ಅವನು

ಹೋದ ಮೇಲೆ ಈಕೆ ಅಂದಳು: "ಎಂಥ ಬಂಗಾರದಂಥ ಸ್ವಭಾವ ಶ್ಯಾಮಣ್ಣನದು. ಆದರೆ ಅವನಿಗೆ ತಕ್ಕ ಹೆಂಡತಿಯಲ್ಲ. ಅವಳೂ ಒಬ್ಬಳು ಶ್ಯಾಮಣ್ಣನ ಹಾಗೇ ಇದ್ದರೆ ಎಷ್ಟು ಸೆಟ್ಟಗಾಗುತ್ತಿತ್ತು!" "ಸ ಹೋಯಿತು, ಎರಡೂ ಕಡೆಗೆ ಬೆಣ್ಣೆಯಿಟ್ಟು ಯಾರೂ ತೂಗುವದಿಲ್ಲ. ಒಂದು ಕಡೆಗೆ ಕಲ್ಲು, ಒಂದು ಕಡೆಗೆ ಬೆಣ್ಣೆ. ದೇವರು ಹೀಗೇ ಗಂಟು ಹಾಕಿರ್ತಾನೆ'' ಎಂದು ನಾನು ಆಕೆಗೆ ಏನೋ ಒಂದು ಸಮಾಧಾನ ಹೇಳಿದೆ.

* * * *

ಈಗ ಶ್ಯಾಮನ ಅಂಗಡಿ ಪ್ರಾರಂಭವಾಗಿದೆ. ನೀಲಪ್ಪ ಮನೆಯಲ್ಲಿ ಕೆಲಸ ಮಾಡುತ್ತಿದ್ದಾನೆ. ಯಾರೊಬ್ಬರೂ ಶ್ಯಾಮಣ್ಣನ ಅಂಗಡಿ ಎಂದು ಅಭಿಮಾನದಿಂದ ಒರುವರು. ಅವನ ಸಮಯ ಎಲ್ಲ ಅಂಗಡಿಯಲ್ಲಿಯೇ ಹೋಗುವದು. ಸಾಬೂನು ತಯಾರು ಮಾಡವದು ಅವನಿಂದ ಸರಿಯಾಗಿ ಸೀಗದಿದ್ದರೂ, ಅಂಗಡಿ ಮಾತ್ರ ದಿನದಿನಕ್ಕೂ ಭರದಿಂದ ನಡೆಯುಹತ್ತಿದೆ.

ಈಗ ಅವನ ಮೆಚ್ಚುಗೆಯ ವಿಷಯಗಳೆಂದರೆ ಎರಡು. ಒಂದು ಅಂಗಡಿ ಎರಡನೆಯದು ಅವನ ಮಗು. ಅಂಗಡಿಯಿಂದ ಬಂದನೆಂದರೆ ಮಗನನ್ನೆತ್ತಿಕೊಂಡು ಮನೆತುಂಬ ಕುಣಿದಾಡುತ್ತಾನೆ. ಶ್ಯಾಮ ಮನೆಯಲ್ಲಿಲ್ಲದಾಗ ಮಗು ನೀಲಪ್ಪನ ಕಂಕುಳಲ್ಲಿರುತ್ತದೆ!

ಮಗನ ಅನ್ನಪ್ರಾಶನ ಸಮಾರಂಭಕ್ಕೆ ನನಗೆ ಆಮಂತ್ರಣವಿತ್ತು ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಬಂಗಾರದ ಕಿರುಬಟ್ಟ- ಲೊಳಗಿನ ಪಾಯಸವನ್ನು ಅಷ್ಟೇ ಕಿರಿದಾದ ಚಮಚೆಯಿಂದ ಶ್ಯಾಮ ಮಗುವಿಗೆ ತಿನ್ನಿಸಿದ ತಾಯ ಹೊಟ್ಟೆ ತಣಿಯಿತು. ಅಲ್ಲಿ ಸೇರಿದವರೆಲ್ಲ ಸಂತೃಪ್ತರಾದರು. ಈ ಸಮಾರಂಭಕ್ಕೆ ಒಂದು ಅಪರಿಚಿತ ವ್ಯಕ್ತಿ ಮುಂದೆ ಮುಂದೆ ಓಡಾಡುತ್ತಿತ್ತು. ಮನೆಗೆ ಹೊರಡುವಾಗ ನಾನು ಶ್ಯಾಮನನ್ನು ಬೇರೆ ಕರೆದು ಅವನ ಬಗ್ಗೆ ಕೇಳಿದೆ. "ಈಕೆಯ ಸೋದರತ್ತೆಯ ಮಗ ಇಂಟರ್ ವರೆಗೆ ಓದಿದ್ದಾನೆ, ಕೆಲಸ ಎಲ್ಲಿಯೂ ದೊರೆಯಲಿಲ್ಲ ಎಂದು ಬಂದಿದ್ದಾನೆ. ನನಗೂ ಅಂಗಡಿಯ ಕೆಲಸದಲ್ಲಿ ಸಹಾಯವಾಗಬಹುದು ಮನೆಯಲ್ಲಿ ಇಟ್ಟುಕೊಳ್ಳಬೇಕೆಂದು ವಿಚಾರ!" ಎಂದು ಹೇಳಿದ "ಯೋಗ್ಯನಿದ್ದರೆ ಇಡಬಹುದು. ಆದರೆ ಒಮ್ಮೆಲೆ ನಂಬಲಿಕ್ಕಾಗದು!" ಎಂದು ನಾನು ಎಚ್ಚರಿಕೆ ಕೊಟ್ಟೆ. ಈ ಅಪರಿಚಿತ ವ್ಯಕ್ತಿಯ ಹೆಸರು **ವಸುದೇವ!**

ಕೆಲವರ ಸಂಸಾರದಲ್ಲಿ ಹಲಕೆಲವು ಸಂಗತಿಗಳು ತೀರ ಆಕಸ್ಮಿಕವಾಗಿ ಸಂಭವಿಸುವುದುಂಟು. ಸಾಮಾನ್ಯವಾಗಿ ಎಲ್ಲಕ್ಕೂ ಅಕಲ್ಪಿತವಾಗಿ ಬರುವುದು ಎಂದರೆ ಸಾವು. ಶ್ಯಾಮನ ಕೂಸು ಚಂಡಿನಂತೆ ತುಂಬಿಕೊಂಡು ಸುಖವಾಗಿದ್ದುದು ಒಂದು ದಿನ 'ವೈಲಿ'ಯೆದ್ದು ಹೋಗಿಯೇ ಬಿಟ್ಟಿತು! ಇರ್ವರಿಗೂ ಅತೀವ ದುಃಖವಾಯಿತು. ಶಾಮನಿಗೆ ವಾಸಂತಿಯನ್ನು ಸಂತಯಿಸಬೇಕಾದರೆ ಸಾಕುಬೇಕಾಗಿ ಹೋಯಿತು. ಈಗ ಅಂಗಡಿಯ ಹೊಣೆಯನ್ನೆಲ್ಲ ವಸುದೇವನೇ ನಿರ್ವಹಿಸುತ್ತಿದ್ದಾನೆ. ಶ್ಯಾಮ ನಾಲ್ಕಾರು ದಿನಕ್ಕೊಮ್ಮೆ ಒಂದು ಕ್ಷಣ ಹೀಗೆ ಅಂಗಡಿಯನ್ನು ಹಣಿಕಿ ಹಾಕಿ ನೋಡಿಕೊಂಡು ಹೋಗುತ್ತಾನೆ.

ಶ್ಯಾಮನ ಮನೆಯಲ್ಲಿ ಈಗ ನೀಲಪ್ಪನಿಗೆ ಕೆಲಸವಿರಲಿಲ್ಲ. ಭಂಗಾರದಂಥ ಕೂಸು, ತನ್ನ ಕೈಕಂಕುಳಲ್ಲಿ ಅರಳುತ್ತಿದ್ದುದು, ಆಡಾಡುತ್ತಾ ಉದುರಿ ಹೋಯಿತಲ್ಲಾ ಎಂದು ಅವನಿಗೆ ಬಹಳ ಕಸವಿಸಿ. ಬಣ್ಣದ ಕಾರಖಾನೆ ನಿಲ್ಲಿಸಿ ತನ್ನನ್ನು ಧಣಿ ಮನೆಯಲ್ಲಿ ತಂದಿಟ್ಟುದಕ್ಕಾಗಿ ಮೊದಲೇ ಅವನು ಬಹಳ ನೊಂದುಕೊಂಡಿದ್ದ. ಆದರೂ ತನ್ನೊಡೆಯನ ಆಜ್ಞೆ ಇದುವರೆಗೆ ಸಲುಹಿದ್ದಾನೆ. ಏನೇ ಆದರೂ ಅವನನ್ನು ಅಗಲಿ ಹೋಗುವ ಹಾಗಿಲ್ಲ-ಎಂದು ಅವನ ಭಾವನೆ. "ಮನೆಯಲ್ಲಿ ಕೆಲಸ ಮಾಡಿಕೊಂಡಿರು" ಎಂದ ಧಣಿ; ಹಾಗೆ ಮಾಡಿದ. 'ಕೂಸನ್ನಾಡಿಸಿಕೊಂಡಿರು' ಎಂದ. ಹಾಗೂ ಮಾಡಿದ. ಈಗ ಕೂಸು ಹೋಯಿತು— ಇನ್ನಾವ ಕೆಲಸ ತನ್ನ ಪಾಲಿಗೆ ಬರುವುದೋ ಎಂದು ಅವನಿಗೆ ಚಿಂತೆಯುಂಟಾಯಿತು. ಮನೆಯಲ್ಲಿ ಯಾವ ಗೋಜಿಗೂ ಹೋಗುತ್ತಿರಲಿಲ್ಲ. ಹೇಳಿದಷ್ಟು ಕೆಲಸ ಮಾಡುವ. ಆದರೆ ಎಲ್ಲ ಕಡೆಗೂ ಕಾಕದೃಷ್ಟಿ ಅವನದು. ಮನೆಯಲ್ಲಿ ನಡೆಯುವುದನ್ನೆಲ್ಲ ನೋಡಿ ಮನಸ್ಸಿನಲ್ಲಿಡುವ. ಅವನ ಕಣ್ಣೆಲ್ಲ ವಾಸಂತಿ ಮತ್ತು ವಸುದೇವರ ಮೇಲೆ. ತನ್ನ ಧಣಿಯ ಮನೆತನ, ಆತನ ವ್ಯವಹಾರ ಯಾವದೋ ಒಂದು ತಪ್ಪುದಾರಿ ಹಿಡಿದಿದೆಯೆಂದು ಅವನಿಗೆ ಆಗಾಗ ಎನಿಸುವುದು. ಅದಕ್ಕೆ ಕಾರಣ— ಈಗ ಮನೆಯಲ್ಲಿ ವಾಸಂತಿಯ ಕಾರಭಾರ; ಅಂಗಡಿಯಲ್ಲಿ ವಸುದೇವನ ಕಾರಭಾರ!

ಶ್ಯಾಮನ ತಲೆಯಲ್ಲಿ ಅದೇನು ಬಂದಿತೋ, ಒಂದು ದಿನ ಏಳುವ ಪುರಸತ್ತಿಲ್ಲದೆ ನೀಲಪ್ಪನಿಗೆ ಆಜ್ಞೆಮಾಡಿದ: 'ನೀನು ಇವೊತ್ತಿನಿಂದ ಅಂಗಡಿ

ಯಲ್ಲಿ ಕೆಲಸ ಮಾಡತಕ್ಕದ್ದು' ಎಂದು. ನೀಲಪ್ಪ ಏನೋ ಹೇಳಬೇಕೆಂದಿದ್ದ. ಆದರೆ ಧಣಿಯ ಬಿಗಿದ ಮುಖ, ಬಿರುಸಿನ ಮಾತು ಕೇಳಿ ಸುಮ್ಮನಾಗಿ ಬಿಟ್ಟ.

ನೀಲಪ್ಪ ಬರುವ ಮೊದಲು ಅಂಗಡಿಯ ವ್ಯವಹಾರದಲ್ಲಿ ತನಗಿದ್ದ ಸ್ವೇಚ್ಛಾರೀತಿ ಈಗ ಇಲ್ಲವೇನೋ ಎನಿಸುವುದು ವಸುದೇವನಿಗೆ. ತಾನೇನನ್ನಾದರೂ ಶ್ಯಾಮನಿಗೆ ತಿಳಿಸದೆ ಮಾಡಿದರೆ ನೀಲಪ್ಪನೆಲ್ಲಿ ಅದನ್ನು ಬಯಲಿಗಿಡುವನೊ ಎಂದು ಭಯ ತಾನು ಅವನ ಮೇಲೆ ಅಧಿಕಾರ ನಡೆಯಿಸಬಹುದು ಎಂದು ಹಾಕಿದ ಎಣಿಕೆ ತಪ್ಪಿ ಪ್ರತಿಯಾಗಿ ತಾನೇ ನೀಲಪ್ಪನಿಗೆ– ಮನಸ್ಸಿನಲ್ಲಿ– ಅಂಜಿ ನಡೆಯುವ ಹಾಗಾಯಿತು!

ಒಂದು ದಿನ ಶ್ಯಾಮು ಎಂದಿನಂತೆ ಅಂಗಡಿಗೆ ಹೋದಾಗ ನೀಲಪ್ಪ ಕಾಣಲಿಲ್ಲ ವಸುದೇವನನ್ನು ವಿಚಾರಿಸಿದ: ' ನೀಲಪ್ಪ ಎಲ್ಲಿ?''

"ನಾಲ್ಕು ದಿನ ಆಯ್ತು, ಅಂಗಡಿಗೇ ಬಂದಿಲ್ಲ! ಜ್ವರವಂತೆ!''

"ಈಗ ಹ್ಯಾಗಿದೆ?"

"ನನಗೆ ಗೊತ್ತಿಲ್ಲ, ನಾನೂ ವಿಚಾರಿಸಿಲ್ಲ. ಕಡಮೆ ಆದರೆ ತಾನೇ ಬರುತ್ತಾನೆ. ಇಷ್ಟಕ್ಕೂ ಜ್ವರ ನಿಜವೊ ಅಥವಾ ಸುಮ್ಮನೆ ಜ್ವರದ ಸೋಗು ಹಾಕಿದ್ದಾನೊ ಯಾರಿಗೆ ಗೊತ್ತು?'' ಎಂದು ವಸುದೇವ ತಿರಸ್ಕಾರದ ನಗೆ ನಕ್ಕ.

ಶ್ಯಾಮು ಏನೂ ಮಾತನಾಡಲಿಲ್ಲ. ಒಂದು ಚೀಟಿ ಬರೆದು ಅಂಗಡಿಯ ಹುಡುಗನ ಕೈಯಲ್ಲಿ ಕೊಟ್ಟು ಹೇಳಿದ: ಇದನ್ನು ಡಾ. ನಾಡಗೀರ್ ಅವರಿಗೆ ಮುಟ್ಟಿಸು; ಹಾಗೇ ಐದು ರೂಪಾಯಿ ತೆಗೆದುಕೊಂಡು ಹೋಗಿ ನೀಲಪ್ಪನ ತಾಯಿಯ ಕೈಯಲ್ಲಿ ಕೊಡು!" ವಸುದೇವನಿಗೆ ಹ್ಯಾಗೋ ಆಯಿತು.

ನೀಲಪ್ಪ ಎಂದೂ ಖಾಯಿಲೆ ಬಿದ್ದವನಲ್ಲ. ಕಲ್ಲಿನಂಥ ಶರೀರ ಅವನದು. ಆದರೆ ಇತ್ತೀಚೆಗೆ ಜರುಗಿದ ಸಂಗತಿಗಳು ಅವನ ದೇಹಸ್ವಾಸ್ಥ್ಯವನ್ನು ಬಹುವಾಗಿ ಕೆಡಿಸಿದ್ದುವು. ಇಷ್ಟಾಗಿ ವಸುದೇವನ ರೀತಿ–ನಡತೆ ಅವನಿಗೆ ಎಳ್ಳಷ್ಟು ಸೇರಿಕೆ ಬರುತ್ತಿರಲಿಲ್ಲ ಮಾತುಮಾತಿಗೂ ಅವನೊಡನೆ ಚಿಕ್ಕಾಟ ನಡೆದೇ ಇತ್ತು. ಮನಸ್ಸಿನಲ್ಲಿಯೆ ಕುದಿಯುವ. ಧಣಿಯ ಮುಂದೆ ಹೇಳಿದರೆ ಏನೋ ಎಂದು ಭಯ. ವಾಸಂತಿಬಾಯಿಯ ಆಪ್ತ

ವಸುದೇವ. ಅವಳಿಗೆ ಬೇಕಾದವ. ಹೆಂಡತಿಯ ಮಾತನ್ನು ಕೇಳಿ ಧಣಿ ಏನು ಮಾಡಿ ಬಿಟ್ಟಾನು. ನಂಬಿಗೆ ಸಾಲದು! ಮನಸ್ಸಿನ ಈ ದುಗುಡ ಅವನಿಗೆ ಜ್ವರ ತಂದಿತು.

ಮುಂದೆ ಜಡ್ಡು ನೆಟ್ಟಗಾಗಿ ನೀಲಪ್ಪ ಕೆಲಸಕ್ಕೆ ಬರಬೇಕಾದರೆ ಎರಡು ವಾರ ಹಿಡಿಯಿತು. ವಸುದೇವ 'ಇವನು ಯಾಕೆ ಬಂದಿದ್ದಾನು— ಜಡ್ಡಾಗಿತ್ತು, ಹಾಗೇ ಹೋಗಿಬಿಡಬಾರದೇ ರಂಡೇಮಗ!'— ಎಂದುಕೊಂಡ ಮನಸ್ಸಿನಲ್ಲಿ.

ನೀಲಪ್ಪನಿಗೆ ಸಂಬಳ ಕೊಡುವಾಗ ವಸುದೇವ ಔಷಧದ ಖರ್ಚು, ನಗದು ಕಳಿಸಿದ ಐದುರೂಪಾಯಿ ಹಿಡಿದು, ಉಳಿದದ್ದನ್ನು ಅವನ ಕೈಯ್ಯಲ್ಲಿಟ್ಟ. ಮೂರು ರೂಪಾಯಿಯಿಂದ ತಿಂಗಳವರೆಗೆ ಹೊಟ್ಟೆ ನಡೆಯುವುದು ಸಾಧ್ಯ ವಿರಲಿಲ್ಲ. ತನ್ನ ಧಣಿಯೇ ಹೀಗೆ ಮಾಡಿರಬಹುದೇ ಎಂಬುದು ಅವನಿಗೆ ತಿಳಿಯದಾಯಿತು. 'ತನ್ನ ಧಣಿ ಹೀಗೆಂದಿಗೂ ಮಾಡಿರಲಾರ' ಎಂದು ಆಗಾಗ ಎನಿಸುವುದಾದರೂ ವಸುದೇವನು ತನ್ನ ವಿಷಯವಾಗಿ ಏನೇನಾದರೂ ಹೇಳಿ ಆತನ ಮನಸ್ಸು ತಿರುಗಿಸಿದ್ದರೆ ಮಾಡುವುದೇನು? ಅದಕ್ಕೆ ವಾಸಂತಿಬಾಯಿ ಸ್ವಲ್ಪ ಪುಟಕೊಟ್ಟಿದ್ದರಂತೂ ಮಾತೇ ಮುಗಿಯಿತು. ಇವೆಲ್ಲ ವಿಚಾರ ಅವನ ತಲೆಯಲ್ಲಿ ಬಂದು ಅವನಿಗೆ ಅತ್ಯಂತ ದುಃಖವಾಯಿತು. ಏನೂ ತೋಚದಂತಾಯಿತು. ನೇರವಾಗಿ ನನ್ನ ಮನೆಗೆ ಬಂದ.

"ಏನು ನೀಲಪ್ಪ. ಕಾಯಿಲೆಯೆಂದು ಕೇಳಿದ್ದೆ, ಈಗ ಹ್ಯಾಗಿದೆ?"

"ಈಗ ಪೂರಾ ನೆಟ್ಟಗಾಗ್ಯೆತಿ ರಾಯರ!"

"ಆದರೂ ಮೋರೆಯ ಮೇಲೆ ಇನ್ನೂ ಮೊದಲಿನ ಲಕ್ಷಣ ಬಂದಿಲ್ಲ ಶಕ್ತಿ ಬರಲು ಔಷಧ ತೆಗೆದುಕೋ"

'ಎಲ್ಲೀ ಸಗತಿ ಔಸಿದ್ದೆ, ರಾಯರ! ಬರೋ ಸಂಬಳಿಲ್ಲಾ ಔಸಿದ್ದೇಕ್ಕಿಟ್ರ ಹೊಟ್ಟೆಗೆ ಕೇರು ಹಾಕೋದs ಸೈ!"

"ಅದ್ಯಾಕೋ! ನಿನ್ನ ಔಷಧಕ್ಕೆ ತಾನು ಖರ್ಚುಮಾಡಿದೆನೆಂದು ನಿನ್ನ ಧಣಿ ಹೇಳಿದನಲ್ಲ ?"

'ಇದು ನೋಡ್ರಿ ರಾಯರ, ಔಸಿಧ್ಧೀದ ಖರ್ಚೂ ಅಂತ ಹನ್ನೆರಡು ರೂ. ಹಿಡಿದುಕೊಂಡು, ಮೂರು ರೂಪಾಯಿ ವಸುದೇವಪ್ಪ ನನ್ನ ಕೈಯಾಗ ಇಟ್ಟಾನ. ಇಷ್ಟರಾಗ ನಾವ್ರು ತಿಂಗಳ ಮಟ ಜೀವಹಿಡೀಬೇಕು ರಾಯರ!''

ನನಗೆ ಬಹಳ ಆಶ್ಚರ್ಯವಾಯಿತು. 'ಇದರಲ್ಲಿ ಏನೋ ಮೋಸವಿರ ಬೇಕು; ಶ್ಯಾಮು ಇಂಥ ಕ್ಷುಲ್ಲಕ ಬುದ್ಧಿಯುವನಲ್ಲ ವಸುದೇವನಿಂದಲೇ ಈ ಕೆಲಸವಾಗಿರಬೇಕು.' ಎಂದು ಮನಸ್ಸಿಗೆ ಖಾತ್ರಿಯಾಯಿತು.

''ನೀನು ನಿನ್ನ ಧಣಿಯನ್ಯಾಕ ಕೇಳೂದಿಲ್ಲ?''

''ಹಾವೈತೋ ಚೋಳೈತೋ ನಾ ಕೇಳೂದಿಲ್ಲ, ರಾಯರ! ನಿಮ್ಮ ಕಿವಿ ವ್ಯಾಲಿಟ್ಟೇನಿ; ನೀವೇನ್ಮಾಡ್ತೀರೋ ಮಾಡ್ರಿ! ಒಂದು ವ್ಯಾಳ್ಯಾ ನನ್ನ ಧಣೀನಽಹೀಂಗ ಮಾಡಿದ್ನಽ, ನನ್ನ ನಶೀಬಾನ ಕೆಟ್ಟೈತಂತೀನಿ, ಸುಮ್ನಾಗ್ತಿನಿ'' ಹೀಗೆನ್ನುವಾಗ ಅವನ ಕಣ್ಣು ತುಂಬ ನೀರು ತುಂಬಿಕೊಂಡಿತು. ಅವನಿಗೆ ಸ್ವಲ್ಪ ಸಮಾಧಾನ ಹೇಳಿ ಕಳುಹಿಸಿಕೊಟ್ಟೆ.

ಮಾರನೆಯ ದಿನ ನಾನು ಶ್ಯಾಮನ ಮನೆಗೆ ಹೋದೆ. ಆ ಈ ಹರಟೆ ಆದಮೇಲೆ ನೀಲಪ್ಪನ ವಿಷಯವನ್ನೆತ್ತಿ 'ಅಲ್ಲೊ, ನೀಲಪ್ಪ ಜಡ್ಡಾಗಿ ಸಾಯ ಬಾರದು, ಉಪವಾಸ ಬಿದ್ದು ಸಾಯಬೇಕೂ ಅಂತ ನಿನ್ನ ಮನಸ್ಸಿನಲ್ಲಿದೆಯೇನು?'' ಎಂದೆ.

ಅವನಿಗೆ ಅರ್ಥವಾಗಲಿಲ್ಲ. ''ಯಾಕೆ? ಏನಾಯಿತು? ನನಗೆ ತಿಳಿಯಲಿಲ್ಲ!''

''ಔಷಧದ-ಖರ್ಚು ಅಂತ ಹನ್ನೆರಡು ರೂಪಾಯಿ ಮುರಿದು,ಮೂರು ರೂಪಾಯಿ ಅವನ ಕೈಗೆ ಕೊಟ್ಟಾನಂತೆ ವಸುದೇವ!''

ಈಮಾತು ಕಿವಿಗೆ ಬಿದ್ದೊಡನೆ ಶ್ಯಾಮು ಮೆಟ್ಟಿಬಿದ್ದ—''ನಾನು ವಸುದೇವನಿಗೆ ಹೀಗೆಂದೂ ಹೇಳಿರಲಿಲ್ಲ. ಒಮ್ಮೆ ಈ ವಿಷಯ ನಾನು ಅವನಿಗೆ ಹೇಳಲೆ ಬೇಕು. ನೀಲಪ್ಪನೆಂದರೆ ಅವನಿಗೆ ಆಗುವದಿಲ್ಲ. 'ಮುದುಕ—ಅವನಿಂದ ಕೆಲಸವಾಗುವದಿಲ್ಲ—'ಎಂದು ಹತ್ತೆಂಟು ಸಲ ವಾದರೂ ನನ್ನ ಮುಂದೆ ಅವನು ಅಂದಿರಬೇಕು. ಆದರೆ ದುಡ್ಡಿನ ವಿಷಯ ದಲ್ಲಿ ಸಂಶಯಬರುವ ಹಾಗೆ ನನಗಿನ್ನೂ ಕಂಡುಬಂದಿಲ್ಲ.''

''ಇದು ನೋಡು, ಶ್ಯಾಮು, ವಸುದೇವನ ವಿಷಯ ಸಂಶಯ ಬರುವ ಹಾಗೆ ಏನೂ ಇಲ್ಲ...ಎಂದು ನೀನು ಹೇಳಬಹುದು; ಆದರೂ ದುಡ್ಡು ಬಹಳ

ಕೆಟ್ಟಿದ್ದು. ಮಾಡಿದ ಕಳವು ದಕ್ಕುವುದು ಎನಿಸಿದರೆ ಎಂಥವನಿಗೂ ನಿಗ್ರಹ ಉಳಿಯುವುದಿಲ್ಲ. ನಮ್ಮ ಕಣ್ಣು ನೋಡುತ್ತಿರುವವರೆಗೆ ಎಲ್ಲರೂ ಪ್ರಾಮಾಣಿಕರೆ! ನೀಲಪ್ಪನ ಹಾಗೆ ಎಲ್ಲರೂ ಇರುವುದಿಲ್ಲ. ಇನ್ನೂ ಕೆಲವು ದಿನ ನೀನು ವಸುದೇವನನ್ನು ಪರೀಕ್ಷಿಸಬೇಕು. ನೀನೂ ಇನ್ನು ಅಂಗಡಿಯಲ್ಲಿ ಹೆಚ್ಚು ಮನಸ್ಸು ಹಾಕು. ಮನೆಯಲ್ಲಿ ಕುಳಿತರೆ ಮಗುವಿನ ನೆನಪಿನಿಂದ ಮನಸ್ಸು ಮತ್ತಷ್ಟು ವ್ಯಗ್ರವಾಗುವುದು. ನೀನು ಪುನಃ ಸಾಬೂನು ಯಾಕೆ ತಯಾರು ಮಾಡುವುದಿಲ್ಲ?"

"ಮಾಡಬಹುದಾಗಿತ್ತು: ಆದರೆ ಈಗ 'ಕಾಸ್ಟಿಕ್ ಸೋಡಾ' ಮುಂತಾದುವು ಸಿಕ್ಕುವುದಿಲ್ಲ. ಇದೂ ಅಲ್ಲದೆ ಸಾವಿರಗಟ್ಟಲೆ ಬಂಡವಾಳ ಹಾಕದೆ ಈ ಉದ್ಯೋಗಗಳು ಯಶಸ್ವಿಯಾಗಲಾರವು. ನಾನು ಇನ್ನೊಂದು ವಿಷಯ ಯೋಚನೆ ಮಾಡಿದ್ದೇನೆ: ಮುಂಬಯಿಗೆ ಹೋಗಿ ಒಂದೆರಡು ಒಳ್ಳೆ 'ಏಜನ್ಸಿ' ಹಿಡಿದುಕೊಂಡು ಬರಬೇಕೂ ಅಂತ ಮನಸ್ಸಿನಲ್ಲಿದೆ. ಮುಂದಿನವಾರ ಹೋಗಬೇಕಂದಿದ್ದೇನೆ, ಬರಿ ಅಂಗಡಿಯಿಂದ ನಮ್ಮೆಲ್ಲರ ಹೊಟ್ಟೆ ಸಾಗದು!"

ನಾನು ಹೆಚ್ಚು ಮಾತನಾಡಲಿಲ್ಲ. "ನೋಡಿ ಕೆಲಸ ಮಾಡು" ಎಂದು ಹೇಳಿ ಮರಳಿ ಬಂದೆ.

* * * *

ಶ್ಯಾಮು ಮುಂಬಯಿಗೆ ಹೋಗಿ ಒಂದು ತಿಂಗಳಾಗಿತ್ತು. ಅಂಗಡಿಯಲ್ಲಿ ವಸುದೇವ ನೀಲಪ್ಪ ಇಬ್ಬರೇ. ಅಗ್ಗವಾಗಿ ತೋರಿದ ಜಿನಸುಗಳನ್ನೆಲ್ಲ ಖರೀದಿಮಾಡಿ ಶ್ಯಾಮು ಅಂಗಡಿಗೆ ಕಳುಹಿಸುತ್ತಿದ್ದ. ಒಂದು ದಿನ ಸಾಮಾನಿನ ಜೊತೆಗೆ ಅವನದೊಂದು ಫೋಟೋ ಬಂದಿತು. ಅದನ್ನು ಅಂಗಡಿಯಲ್ಲಿಡಬೇಕೆಂದು ನೀಲಪ್ಪ, 'ಬೇಡ' ಎಂದು ವಸುದೇವ. ಕೊನೆಗೆ ವಸುದೇವನ ಹಟವೇ ನಡೆಯಿತು!

ಮುಂಬಯಿಯಿಂದ ಬರುವಾಗ ಶ್ಯಾಮು ಜ್ವರ ಕಟ್ಟಿಕೊಂಡೇ ಬಂದ! ನಲವತ್ತೊಂದು ದಿನ ಬಂದ ಜ್ವರ ನಿಲ್ಲಲೇ ಇಲ್ಲ. ಆರಯಿಕೆಯ ಭಾರವನ್ನೆಲ್ಲ ನೀಲಪ್ಪನೇ ಹೊತ್ತಿದ್ದ. ಹಗಲು ರಾತ್ರಿಯೆನ್ನದೆ ನೀಲಪ್ಪಧಣಿಯನ್ನು ಉಪಚರಿಸಿದ. ನಲವತ್ತೊಂದು ದಿನಗಳ ನಂತರ ಜ್ವರ ನಿಂತವು. ಶ್ಯಾಮು

ಮರಣದ ಕುತ್ತಿನಿಂದ ಪಾರಾದ; ಪುನರ್ಜನ್ಮವಾದಂತಾಯಿತು. ನೀಲಪ್ಪನ ಕೈಗೆ ಯಶಸ್ಸು ಬಂದಿತು ಎಂದು ಎಲ್ಲರಿಗೂ ಆನಂದವಾಯಿತು. ಆದರೆ ವಿಧಿಗೆ ಈ ಆನಂದವನ್ನು ನೋಡುವುದಾಗಲಿಲ್ಲ. ಶ್ಯಾಮ ಅಪಥ್ಯ ಮಾಡಿದ. ಮುಂದೆ ಒಂದು ವಾರದಲ್ಲಿಯೆ ರೋಗ ಮರುಕಳಿಸಿ, ನಮ್ಮೆಲ್ಲರನ್ನೂ ದುಃಖದಲ್ಲಿ ಮುಳುಗಿಸಿ ಶ್ಯಾಮ ಹೊರಟು ಹೋದ.

ನಾವೆಲ್ಲ ಶ್ಯಾಮನ ಸ್ನೇಹಿತರು. ಅವನೊಡನೆ ಕೂಡಿ ಬೆಳೆದವರು, ಕೂಡಿ ಕಲಿತವರು. ಅವನ ಸ್ವಭಾವಕ್ಕೆ ಮೆಚ್ಚಿದವರು, ಅಂತಃಕರಣಕ್ಕೆ ಮನಸೋತವರು; ಮಾತಿಗೆ ನಕ್ಕು ಮಂಕಾಟಕ್ಕೆ ಗೇಲಿಮಾಡಿದವರು. ಅದೆಲ್ಲ ಇಂದು ಒಂದೊಂದೇ ನೆನಪಾಗಿ, ನಮ್ಮೆಲ್ಲರ ಮನಸ್ಸು ತುಂಬ ಸಂತಾಪಗೊಂಡಿತ್ತು. ವಯಸ್ಸು ಆದವರು ಸತ್ತರೆ ಸ್ಮಶಾನದಲ್ಲಿ ಕೂಡ ಗಂಭೀರತೆ ಇರುವುದಿಲ್ಲ. ಆದರೆ ಶ್ಯಾಮನ ವಿಷಯ ಹಾಗಿರಲಿಲ್ಲ. ತೀರ ಹರಯದವ. ಇಪ್ಪತ್ತಾರನೆಯ ವಯಸ್ಸಿಗೆ ಎಲ್ಲ ಮುಗಿಸಿಕೊಂಡು ಎದ್ದು ಬಿಟ್ಟ. ಕಲಿಯುವುದಾಯಿತು, ವ್ಯಾಪಾರವಾಯಿತು, ಮದುವೆ ಆಯಿತು, ಮಗುವಾಯಿತು; ಕೊನೆಗೆ ಮರಣವೂ ಬಂದು ಕಚ್ಚಿಕೊಂಡು ಹೋಯಿತು! ಸ್ಮಶಾನದಲ್ಲಿ ನೆರೆದವರೆಲ್ಲರೂ ಶ್ಯಾಮನ ಗುಣಗಳನ್ನು ಕೊಂಡಾಡಿ; ತಮಗೆ ಬಂದ ಅನುಭವಗಳನ್ನು ಆಡಿತೋರಿಸುತ್ತಾ ಇದ್ದರು. ನಾನು ಸ್ವಲ್ಪ ಹೆಣ್ಣುಗರುಳಿನವ ಎಷ್ಟೋ ಸಲ ನನಗೆ ಕಣ್ಣೀರು ಉಕ್ಕಿ ಉಕ್ಕಿ ಬಂದು ಹಿಮ್ಮೆಟ್ಟಿತು. ಎಲ್ಲರಿಗಿಂತ ನೀಲಪ್ಪನನ್ನು ನಾನು ಕಣ್ಣಿಟ್ಟು ನೋಡುತ್ತಿದ್ದೆ. ಅವನ ದುಗುಡದ ಆಳವನ್ನು ನಾನಂದು ತಿಳಿಯದಾದೆ. ಮುಖದಮೇಲೆ ಯಾವ ಭಾವನೆಯ ಚಿನ್ಹೆಗಳೂ ಮೂಡಿರಲಿಲ್ಲ. ತನ್ನ ಧಣಿಗಾಗಿ ರಕ್ತವನ್ನು ನೀರಾಗಿಸಿದವ. 'ಧಣಿಯದೆಲ್ಲ ತನ್ನದು, ತಾನು ಧಣಿಗೆ ಮೀಸಲು' ಎಂಬ ಒಂದೇ ಒಂದು ವಿಶ್ವಾಸದಿಂದ, ಶ್ಯಾಮನ ತಂದೆಯ ಕಾಲದಿಂದಲೂ ಸೇವೆ ಗೈದವ. ಅವನಿಗೆ ಸ್ವಂತಕ್ಕಾಗಿ ಯಾವುದೂ ಬೇಕಾಗಿರಲಿಲ್ಲ. ಯಾವ ಆಸೆಯೂ ಅವನನ್ನು ಮೋಹಿಸಿರಲಿಲ್ಲ. ಅವನಿಗಿದ್ದುದು ಒಂದೇ ಆಸೆ: 'ತನ್ನಧಣಿ ಸುಖವಾಗಿರಬೇಕು!' ಆದರೆ ಇಂದು ಶ್ಯಾಮನ ದೇಹದ ಜೊತೆಗೆ ಈ ಅವನ ಆಶೆಯೂ ಚಿತೆಯಲ್ಲಿ ಸುಡುತ್ತಾ ಇತ್ತು. ಅದನ್ನು ನೋಡುತ್ತಾ ನಿಶ್ಚಲವಾಗಿ ನಿಂತುಬಿಟ್ಟಿದ್ದ. ಅವನಿಗೇನೆಂದು ಸಮಾಧಾನ ಹೇಳಬೇಕು

ಏನು ಹೇಳುವದಕ್ಕೂ ಬುದ್ಧಿ ಸಾಲದು. ಅಲ್ಲಿಯ ಕಾರ್ಯ ಮುಗಿದ ಮೇಲೆ ಎಲ್ಲರೂ ಹೊರಟರು; ಆದರೂ ನೀಲಪ್ಪ ನಿಂತೇ ಇದ್ದ. ನಾನು ಹತ್ತಿರ ಹೋಗಿ— "ನೀಲಪ್ಪ, ಇಲ್ಲಿಯ ಕೆಲಸ ಮುಗಿಯಿತು. ಎಲ್ಲರೂ ಹೊರಟರು. ನಡೆ ನಾವೂ ಹೋಗೋಣ!" ಎಂದು ಕರೆದೆ.

"ಬ್ಯಾಡ, ರಾಯರ, ಮನೀಗೆ ಹೋಗಿ ಏನು ಮಾಡೋದೈತಿ? ಇಲ್ಲೇ ಕುಂತು ಬಿಡ್ತೀನಿ!" ಅಂದ.

"ಹುಚ್ಚಾ, ಇಲ್ಲಿಗೆ ಒರುವುದು ಸತ್ತಮೇಲೆ, ಇದ್ದಾಗಲ್ಲ!"

"ನನ್ನ ಧಣಿ ಹೋದಮ್ಯಾಲ ನಾ ಸತ್ಹಾಂಗ ರಾಯರ, ಮುಕ್ಕಾಲ ಗಳಿಗಿ ಪರಪಂಚಮಾಡಿ ಮೂವತ್ತ ವರಸದಾಗs ಆ ಮಾರಾಯ ಮುಗಿಸಿ ಕೊಂಡು ಬಿಟ್ಟ. ಅರವತ್ತು ವರಸ ಸನ್ಯಾಕ ಒಂದರೂ, ದೇವರ, ನನ್ನ ಮರತುಬಿಟ್ಟಾನ!"

"ದೇವರು ಯಾರನ್ನೂ ಮರೆಯುವದಿಲ್ಲ. ಅವರವರ ಕಾಲಕ್ಕೆ ಸರಿಯಾಗಿ ಅವರನ್ನು ಒಯ್ದೇ ತೀರತಾನೆ. ಇಂದು ಶ್ಯಾಮಣ್ಣನ ಸರತಿ ಮುಗಿಯಿತು; ಮುಂದಿನ ಸರತಿ ನಿನ್ನದಿರಬಹುದು ಅಥವಾ ನನ್ನದೇ ಇರಬಹುದು. ಸ್ಮಶಾನದ ಗಾಳಿಯೇ ಅಷ್ಟು. ಇಲ್ಲಿರುವವರೆಗೆ ಇಂಥ ವಿಚಾರಗಳೇ ಒರೋದು. ಎಲ್ಲರೂ ಹೋದರು, ನಡೆ ಹೋಗೋಣ!"

ನೀಲಪ್ಪ ಚಿತೆಗೆ ಕೈಮುಗಿದ. ಬೂದಿ ತೆಗೆದು ಹಣೆಯಲ್ಲಿ ಧರಿಸಿದ. 'ಮಾರಾಯ, ನೀನು ಕೊಡೊ ಅನ್ನದ ಋಣ ಇಂದಿಗೆ ಮುಗೀತು' ಎಂದು ಅವನ ಬಾಯಿಂದ ಬಂತು.

ಇಬ್ಬರೂ ಹೊರಟೆವು—ದಾರಿಯುದ್ದಕ್ಕೂ ನನ್ನ ತಲೆಯಲ್ಲಿ 'ಶ್ಯಾಮನ ಅಂಗಡಿ ಇನ್ನು ಹ್ಯಾಗೆ ನಡೆಯಬಹುದು? ವಸುದೇವ ಯಾವ ದುರಾಶೆಗೂ ಒಳಗಾಗದೆ ವಿಶ್ವಾಸದಿಂದ ಇರಬಹುದೋ? ವಾಸಂತಿ— ಪಾಪ, ಗಂಡನ ವಿಯೋಗವನ್ನು ಆಜನ್ಮ ಹೇಗೆ ಸಹಿಸಬೇಕು? ನೀಲಪ್ಪನ ಗತಿಯೇನು?' ಇಂತೇ ವಿಚಾರಗಳೇ ತಾಕಲಾಡುತ್ತಿದ್ದುವು.

'ನೀಲಪ್ಪ, ನೀನು ಬೇರೇ ಯೋಚನೆ ಮಾಡಬೇಡ, ವಾಸಂತಿ-ಬಾಯಿಗೆ ನಾನು ಹೇಳುತ್ತೇನೆ. ನೀನು ಮತ್ತೆ ಕೆಲಸಕ್ಕೆ ಹೋಗು! ಬೇಕಾದರೆ ಅಂಗಡಿಯಲ್ಲಿರು, ಇಲ್ಲವಾದರೆ ಅವರ ಮನೆಯಲ್ಲಿದ್ದು ಕೈಲಾದ

ಕೆಲಸ ಮಾಡಿಕೊಂಡು ಜೀವನ ಸಾಗಿಸು! ಈಗಿಷ್ಟಷ್ಟು ಕಾಲ ನೀನು ಮುಂದೆ ಬಾಳಲಾರೆ; ಆದರೆ ಸಾಯುವವರೆಗೆ ಶ್ಯಾಮಣ್ಣನ ಮನೆ ಮಾತ್ರ ಬಿಡಬೇಡ! ಆದರೆ ವಸುದೇವನ ಬಗ್ಗೆ ಮಾತ್ರ ಜೋಕೆ. ಅವನೊಂದು ಕಂಟಕವಾಗಿ ಬಂದಿದಾನೆ"

"ಇಲ್ರೀ, ರಾಯರ, ಧಣಿ ಇದ್ದಾಗಿಂತ ವಸುದೇವಪ್ಪ ಸುಮಾರಿದ್ದ. ಇನ್ನು ಕೇಳ್ತ್ಯಾನ್ರಿ ಆತ ಹುಲಿಬಾಯಾಗ ಆಕಳ ಸಿಕ್ಕ್ಯಾಂಗ ಹರದು ಬಿಟ್ಟಾನ್ನನ್ನ! ನಾನಂತೂ ಅಂಗಡ್ಯಾಗ ಕಾಲಿಡಾಕಿಲ್ರಿ ಇನ್ನ! ಧಣಿ ಹೆಣದ ಮುಂದೆ ನಿಂತು ಆಣೀ ಮಾಡೀನ್ರೀ"

"ಹೌದು. ಹೊಟ್ಟೆಗೇನು ಮಾಡುತ್ತೀಯಪ್ಪಾ? ಈ ವಯಸ್ಸಿಗೆ ಎಲ್ಲಿ ನಿನಗೆ ಕೆಲಸ ದೊರೆಯಬೇಕ.?"

"ಜಗನಂತ ಏನಾದರೂ ಮಾರ್ಗಾ ತೋರಸ್ತಾನ್ರೀ! ಕುಂತು ಉಣಬೇಕನ್ನಾವ ಉಪವಾಸ ಸತ್ತಾನು; ದುಡಿಯಾವ ಎಂದೂ ಹಾಂಗ ಸತ್ತಿಲ್ರಿ."

"ಅದು ಸರಿ, ಆದರೂ ನೀನು ಶ್ಯಾಮಣ್ಣನ ಮನೆ ಬಿಡಬೇಡ. ನಾನು ವಸುದೇವನಿಗೂ ನಿನ್ನ ವಿಷಯವಾಗಿ ಹೇಳತೇನೆ.''

"ಅವನ ಕುತಂತ್ರ ಇನ್ನೂ ಬಾಳ ದೂರೈತ್ರಿ. ತಮಗ ಮುಂದ ತಿಳಿದೀತು. ನಾ ಈಗ ಯಾವ ಮಾತೂ ಆಡಾಕ ವಲ್ಲೆನ್ರಿ !''

ಇವನು ವಸುದೇವನ ವಿಷಯದಲ್ಲಿ ಬಹಳ ನೊಂದುಕೊಂಡಿದ್ದಾನೆ ಇದೂ ಅಲ್ಲದೆ ಶ್ಯಾಮನ ಸಾವಿನಿಂದ ಇವನ ಚಿತ್ತವು ತೀರಸಂತಾಪಗೊಂಡಿದೆ ಇಂಥ ಹೊತ್ತಿನಲ್ಲಿ ಈ ವಿಷಯ ಹೆಚ್ಚು ಚರ್ಚಿಸುವುದು ಬೇಡ ಎಂದು ನಾನು ಸುಮ್ಮನಾದೆ!

ಮರುದಿನವೇ ನನಗೆ 'ಸರ್ಕೀಟ'ನಮೇಲೆ ಹೋಗಬೇಕಾಯಿತು. ತಿರುಗಿ ಊರಿಗೆ ಬರುವದಕ್ಕೆ ಸುಮಾರು ಎರಡುತಿಂಗಳು ಬೇಕಾಯಿತು.

ಈ ಅವಧಿಯಲ್ಲಿ ಶ್ಯಾಮನ ಅಂಗಡಿ, ನೀಲಪ್ಪ ಇವರ ವಿಷಯ ಏನೂ ತಿಳಿದಿರಲಿಲ್ಲ. ಮನೆಯಲ್ಲಿ ಕಾಲಿಟ್ಟ ಕೂಡಲೆ ಈಕೆಯನ್ನು ಕೇಳಿದೆ. "ಯಾವ ವಿಷಯವೂ ತನಗೆ ತಿಳಿಯದು" ಎಂದು ಹೇಳಿದಳು. ಮಾರ್ಗಾ-ಯಾಸದಿಂದ ಬೇಸತ್ತು ಆರಾಮ ಕುರ್ಚಿಯಲ್ಲಿ ಬಿದ್ದುಕೊಂಡಿದ್ದೆ. ಕಣ್ಣು

ಮುಂದೆ ಶ್ಯಾಮನ ಸ್ಮೃತಿಚಿತ್ರ ಒಂದೊಂದಯಾಗಿ ಕಾಣತೊಡಗಿದ್ದುವು. ಒಬ್ಬ ಜವಾನ ಬಂದು ಒಂದು ಕಾಗದ ಕೊಟ್ಟುಹೋದ. ನೋಡಿದೆ—ಸಂತೋಷಕೂಟದ ಆಮಂತ್ರಣ! ವಸುದೇವನಿಂದ ಬಂದಿತ್ತು. ಯಾವ ನಿಮಿತ್ತವೆಂಬುದನ್ನು ಅದರಲ್ಲಿ ಬರೆದಿರಲಿಲ್ಲ.

ಆ ದಿನ ಸಂತೋಷಕೂಟಕ್ಕೆ ಹೋದೆ. ವಸುದೇವನಿಗೆ ಬೇಕಾದ ಜನರೆಲ್ಲ ಸೇರಿದ್ದರು. ಶ್ಯಾಮನ ಸ್ನೇಹಿತರಲ್ಲಿ ಯಾರೊಬ್ಬರೂ ಬಂದಿರಲಿಲ್ಲ ನೀಲಪ್ಪನನ್ನು ವಿಚಾರಿಸಬೇಕೆಂದು ನೋಡಿದೆ. ಅವನೂ ಕಣ್ಣಿಗೆ ಬೀಳ ಲಿಲ್ಲ. ನನಗೆ ಬಹು ಅಚ್ಚರಿಯಾಯಿತು.

ವಸುದೇವ ಅಲ್ಲಿ ಸೇರಿದ ಜನರಿಗೆಲ್ಲರಿಗೂ ಶೃತಪಡಿಸಿದ:- "ವಾಸಂತಿಯ ಇಚ್ಛೆಯ ಮೇರೆಗೆ ಇಂದೇ ಮುಂಜಾನೆ ನಮ್ಮೀರ್ವರ ಪುನರ್ವಿವಾಹ ವಾಯಿತು. ಅದರ ನಿಮಿತ್ತವಾಗಿ ಈ ಸಂತೋಷಕೂಟ" ಎಂದು. ಅದನ್ನು ಕೇಳಿದೊಡನೆ, ನನಗೆ ಅಲ್ಲಿ ನಿಲ್ಲುವುದಾಗಲಿಲ್ಲ. ತಕ್ಷಣ ಎದ್ದು ಬಿಟ್ಟೆ.

ಮುಂಜಾನೆ ಯಾರೋ ಬಂದು ಹೇಳಿದರು: "ಶಾಮನ ಅಂಗಡಿಗೆ ರಾತ್ರಿ ಬೆಂಕಿಬಿದ್ದು ಸುಟ್ಟು ಹೋಯಿತು" ಎಂದು. ಹಾಗೇ ಧಾವಿಸಿ ಹೋದೆ. ಅರ್ಧದಾರಿ ಹೋಗಿದ್ದೆನೊ ಇಲ್ಲವೋ, ನೀಲಪ್ಪ ಎದುರಿಗೆ ಬಂದ. "ಏನಿದು ಅನಾಹುತ, ನೀಲಪ್ಪ? ಶಾಮಣ್ಣನ ಅಂಗಡಿ ಸುಟ್ಟು ಹೋಯಿತಂತೆ!"

"ಹೌದು, ಮನೀಗೆ ನಡೀರಿ, ನಾನು ತಮ್ಮ ಕಡಿಗೇ ಹೊರಟಿದ್ದೆ. ಅದನ್ನs ಹೇಳಾಕ ಬಂದೀನು!"

"ಏನು ಆಯಿತು, ಹ್ಯಾಗೋ ಇದು?"

"ರಸ್ತೇದ ಮ್ಯಾಲೆ ಹೇಳೋ ಮಾತಲ್ಲದು, ನಡೀರಿ!"

ಮನೆಗೆ ಬಂದೆವು. ನೀಲಪ್ಪ ನನ್ನ ಕುರ್ಚಿಯ ಹತ್ತಿರ ನೆಲದ ಮೇಲೆ ಕುಳಿತು, ಕೈ ಜೋಡಿಸಿ, ಹೇಳಹತ್ತಿದ - "ರಾಯರ, ತಾವು ನನಗ ದೇವರಿದ್ಹಾಂಗ. ತಮ್ಮೆದುರ್ಗೆ ಹೇಳಬೇಕಂತ ಬಂದೀನು. ನಾನs ಹಚ್ಚೇಸ್ರಿ ಬೆಂಕೀನ! ನಾ ಯಾಕ ಹಚ್ಚಬಾರ್ದು ನೀವs ಹೇಳ್ರಿ? ರಕ್ತಾ ನೀರು ಮಾಡಿ ಬಣ್ಣದ ಕಾರಖಾನ್ಯಾಗ ದುಡಿದೆ, ಆ ದುಡ್ಡಿನ ಮ್ಯಾಲ

ಅಂಗಡಿ ಆತು; ಸಾಬಾಣದ ಕಾರಖಾನಿ ಆತು. ತಂದೀ ಆಸ್ತಿ ಮಗಾ ತಿನ್ನಾಕ ಬಾಧ್ಯಸ್ತ–ತಿನಲಿ, ಮಗನ ಹೆಸರಿನ ಮ್ಯಾಗ ಅವನ ಕೈ ಹಿಡಿದ ಅವನ ಹೇಣ್ತಿ ತಿಂತಾಳ ಅಂದರ ಅದೂ ಆಗಲಿ, ಅನಬಹುದಿತ್ತು. ಇದ್ಯಾವದೂ ಇಲ್ಲದs, ಯಾವನೋ ಒಬ್ಬ ಲಫಂಗ ಒಂದು ನನ್ನ ಧಣಿ ಆಸ್ತಿ ಎತ್ತಿ ಹಾಕಿ, ಅವನ ಹೇಣ್ತಿ ಸಂಗಾತ ತಾ ಚಕ್ಕಂದಾಡಬೇಕು ಅಂತಾನ. ಇದ ನ್ನೋಡಿ ನಂದ್ಯಾಕ ಹೊಟ್ಟಿ ಉರೀಬಾರದು, ರಾಯರ? ಜೀವಾ ಸಣ್ಣ ಮಾಡಿ ದುಡದೆ; ತಿಂದೇನು ಅಂದರ ಸೇರಿ ಕಾಳಿಲ್ಲ. ಈಗ ಮೂರು ದಿನದಿಂದ ಉಪವಾಸ ಅದೀನ್ರಿ. ಇಶ್ಯಾಸಿಟ್ಟು ದುಡದದ್ದಕ್ಕ ನನ್ನ ಗತಿ ಹೀಂಗ. ಸುಳ್ಳಿನ್ಯಾಗ ಹುಟ್ಟಿ ಬೆಳೆದ ಆ ವಸುದೇವಪ್ಪ ಮಾತ್ರ ಇಂದ ಹತ್ತು ಸಾವಿರದ ಆಸ್ತೀ ಆಯಾತಾ ಒಡಕೊಂಡು ನನ್ನ ಧಣಿಯು ಹೇಣ್ತಿ ಸಂಗತೀಲೆ ಬಾಳ್ವಿಗೆ ನಿಂತಾನು! ಅಂಗಡೀ ನಾ ಯಾಕ ಸುಡಬಾರ್ದು ನೀವಽ ಹೇಳ್ರಿ! ರಾಯರ, ವಸುದೇವಪ್ಪನ್ನ ಕಿತ್ತಿ ಹಾಕಿದ್ರು, ಧಣಿ ಹೆಸರಿನ ಮ್ಯಾಲೆ ನಾ ಅಂಗಡಿ ನಡಸ್ತಿದ್ದೆ. ಆದರ ಆ ಅವ್ವ ತನ್ನ ಸುಖ ಒಂದs ನೋಡಿದ್ಲು. ವಸುದೇವನ ಜಾಲಕ್ಕ ಬಿದ್ದು ಅವನ ಕಾಮದ ಗೊಂಬಿ ಆದ್ಲು. ನನ್ನ ಧಣಿ ಮನೆತನ ಮುಣಿಗಿಸಿದ್ಲು. ಇವರಿಬ್ಬರ ಸೇಡು ತೀರಿಸಬೇಕಂತs ನಾ ಹೀಂಗ ಮಾಡೀನ್ನೋದ್ರಿ! ದೇವರು ನನಗೇನು ಸಿಗ್ಸಾಕೊಡ್ತಾನೋ ಕೊಡಲಿ! ಅದಕ್ಕ ನಾ ಗಟ್ಟಿ ಅದೀನು. ಈಗಿನ ಲಡಾಯಿದಾಗ ತಮ್ಮ ಆಸ್ತಿ ವೈರಿಗಳ ಪಾಲಾಗಬಾರದೂ ಅಂತ ಸುಡ್ತಾರಂತಲ್ರಿ. ಇದು ಕರೇ ವಿದ್ರ ನಾ ಮಾಡಿದ್ದೇನು ತಪ್ಪೈತ್ರಿ?"

ಅವನ ವಿಚಾರಗಳನ್ನೆಲ್ಲ ಕೇಳುತ್ತಾ ಕೂಡುವಾಗ ತಾಳ್ಮೆ ನನಗಿರಲಿಲ್ಲ. 'ಮುಂದೆ ಇವನ ಗತಿಯೇನು?' ಎಂಬ ಯೋಚನೆ ನನ್ನನ್ನು ಬಾಧಿಸುತ್ತಾ ಇತ್ತು. ನಾನು ನಡುವೇ ಬಾಯಿ ಹಾಕಿ ಕೇಳಿದೆ: "ಅದೆಲ್ಲಾ ಆಯಿತು. ನೀನೇ ಅಂಗಡಿ ಸುಟ್ಟೆಯೆಂದು ಅವರಿಗೆ ಗೊತ್ತಾದರೆ?"

"ಈ ಸುದ್ದಿ ತಾನೆ ಗೊತ್ತಾಗೋಧ್ಯಾಂಗ್ರಿ? ಅದಕ್ಕ ನಾನs ಹೇಳಬೇಕಂತ ಮಾಡೇನ್ರಿ!"

"ಹಾಗಾದರೆ ನೀನು ಜೇಲಿಗೆ ಹೋಗುವವನೇ?"

"ಹೋಗಾಕs ಬೇಕ್ರಿ."

"ನಿನ್ನ ತಾಯಿ ?"

"ಆಕೀನೂ ಬರ್‍ತಾಳ್ರಿ!"

ಈ ಮಾತು ಅವನು ಹೇಳುತ್ತಿರುವಾಗ ಬಿನ್ ಡ್ರೆಸ್ಸಿನ ಒಬ್ಬ ಪೋಲೀಸ್ ಬಂದು ನೀಲಪ್ಪನನ್ನು ಹೆಸರುಗೊಂಡು ಕರೆದ. ನೀಲಪ್ಪ ಅಷ್ಟಕ್ಕೇ ಮಾತು ನಿಲ್ಲಿಸಿ ಕೈಮುಗಿದು ಹೊರಟು ಹೋದ.

ಯಾವುದೋ ಒಂದು ದುಸ್ವಪ್ನದಿಂದ ಎಚ್ಚತ್ತಂತಾಯಿತು ನನಗೆ.

---

# ಅಣ್ಣ–ತಮ್ಮ!

ಪ್ರಹ್ಲಾದ ಕಾರಖಾನೆಯಿಂದ ಆದೇ ಬಂದು ಅರಿವೆ ತೆಗೆಯುತ್ತಿದ್ದ; ದ್ರೌಪದಿ ಕಾಗದ ತಂದು ಅವನ ಕೈಯಲ್ಲಿಟ್ಟಳು.

"ಎಲ್ಲಿಯದು ?"

'ಗೊತ್ತಿಲ್ಲ. ನಾನೇನದನ್ನು ಒಡೆಯಲಿಲ್ಲ."

'ಪುಟ್ಟ ಏನಂತಾಳೆ? "

'ಏನಂಬೋದು ? ಕಣ್ಣು ಬಿಡುತ್ತ ಮಲಗಿದ್ದಾಳೆ; ಮಾತಾಡುವ ಪಕ್ಕಾ ಇಂದು ಅವಳಿಗೆ ಚೈತನ್ಯವಿಲ್ಲ. ಇರಲಿ, ಮೊದಲು ಆ ಕಾಗದ ನೋಡಿರಿ! "

ಪ್ರಹ್ಲಾದ ಲಕ್ಕೋಟೆಯನ್ನೊಡೆದು ಓದತೊಡಗಿದ. ದ್ರೌಪದಿ ಅಷ್ಟರಲ್ಲಿ ಒಂದು ಸಲ ಒಳಗೆ ಹೋಗಿ ಬಂದಳು. ಕಾಗದವನ್ನು ಓದಿಆಯಿತು. ಪ್ರಹ್ಲಾದನ ಮುಖದ ಮೇಲೆ ಎರಡು ಪರಸ್ಪರ ವಿರುದ್ಧ ಭಾವನೆಗಳು ಮೂಡಿಕೊಂಡುವು. ಓದುವುದಕ್ಕೆ ಪ್ರಾರಂಭಿಸಿದಾಗ ಅವನ ಮುಖದ

ಮೇಲೆ ಕಾಣಿಸಿಕೊಂಡ ಗೆಲುವು ಅದನ್ನು ಓದಿ ಮುಗಿಸಿದ ಮೇಲೆ ಇರಲಿಲ್ಲ. ದ್ರೌಪದಿ ಇದನ್ನು ಗುರುತಿಸಿದಳು. ತಮಗೆ ಕಾಗದ ಬರೆಯುವವರೆಂದರೆ 'ಇವರ' ತಮ್ಮ ಉಪೇಂದ್ರ. ಅವರು ತಿಂಗಳಿಗೊಂದು ಸಲವೇ ಕಾರ್ಡು ಬರೆಯುತ್ತಿದ್ದರು. ಆದರೆ ಅದಕ್ಕೆ ಇನ್ನೂ ಅವಧಿಯಿತ್ತು. ಹೀಗಿದ್ದು ನಡುವೆ ಬಂದ ಈ ಉದ್ದವಾದ ಪತ್ರ ಯಾರದಿರಬೇಕು—ಎಂಬ ವಿಚಾರಗಳು ದ್ರೌಪದಿಯ ಮನಸ್ಸಿನಲ್ಲಿ ಬಂದವು. ಅವಳು ಅಲ್ಲಿಟ್ಟ ಒಂದು ಕುರ್ಚಿಯ ಮೇಲೆ ಕುಳಿತಳು. ಪ್ರಹ್ಲಾದ ಎದುರಿಗಿಟ್ಟ ಹಾಸಿಗೆಯ ಸುರುಳಿಯ ಮೇಲೆ ಕುಳಿತು, ತೊಡೆಯ ಮೇಲೆ ಮೊಳಕೈಯೂರಿ, ಮುಖವನ್ನದರ ಮೇಲಿರಿಸಿ ವಿಚಾರಕ್ಕೊಳಗಾದ. ಸುದೀರ್ಘವಾದ ಒಂದು ಉಸಿರು ಅವನ ಹೊಟ್ಟೆಯ ತಳದಿಂದ ಹೊರಬಂತು. ನಾಲ್ಕು ಬೆವರ ಹನಿಗಳು ಕೂದಲಿಂದ ಇಳಿದು ಕಿವಿಯ ಹಿಂದಿನಿಂದ ಹಾಯ್ದು, ಭುಜದ ಮೇಲೆ ಬಿದ್ದವು. ದ್ರೌಪದಿ ಒಂದೆರಡು ನಿಮಿಷ ಸುಮ್ಮಗೆ ಕುಳಿತಳು. ಗಂಡನನ್ನು ಶೋಧಕ ದೃಷ್ಟಿಯಿಂದ ನೋಡಿದಳು ಏನೊ ಮಹತ್ವದ ವ್ಯತ್ಯಾಸ ಅವನ ಮುಖಭಾವದಲ್ಲಿ ತೋರಿತು. ಜೀವ ನಿಲ್ಲದೆ ಕೇಳಿದಳು—"ಏನು ಎಲ್ಲಿಯ ಕಾಗದ? ಮುಂಬಯಿಯದಿರಲಾರದು ?"

"ಅಲ್ಲಿಯದೇ, ಉಪೇಂದ್ರನೇ ಬರೆದಿದ್ದಾನೆ."

"ಮತ್ತೇನಂತೆ ? ಇಷ್ಟುದ್ದ ಕಾಗದ ಬರೆಯುವುದಕ್ಕೆ ಕಾರಣ ? ಒಮ್ಮೆ ಓದಿಬಿಡಿರಿ."

"ನೀನೇ ಓದಿಕೊ" ಎಂದು ಪ್ರಹ್ಲಾದ ಕಾಗದ ಅವಳ ಮುಂದೆ ಎಸೆದ.

"ನನಗೆ ಅವರ ಅಕ್ಷರ ತಿಳಿಯುವುದಿಲ್ಲ. ನೀವೇ ಓದಿರಿ. ಬ್ಯಾಡಾ—ಮಜಕೂರು ಹೇಳಿಬಿಡಿರಿ—ಏನಂತಾರೇನು ?"

ಪ್ರಹ್ಲಾದ ಕಾಗದ ತಕ್ಕೊಂಡು ಮೊದಲಿನಿಂದ ಕೊನೆಯವರೆಗೆ ಓದಿದ. ಕಾಗದ ಹೀಗಿತ್ತು:—

"ಮುಂಬಯಿ,"
೨೨-೧-೪೩

"ಅಣ್ಣಾ,

ನಿನಗೊಂದು ಅತ್ಯಂತ ಸಂತೋಷದ ಸಂಗತಿಯನ್ನು ತಿಳಿಸುತ್ತೇನೆ. ನನಗೆ ಸೊಲ್ಲಾಪುರದ ಭಾಗವತ ಚಿತ್ರಮಂದಿರದಲ್ಲಿ 'ಚೀಫ್ ಆಪರೇಟರ್'

(chief operater) ಎಂಬ ಕೆಲಸ ದೊರೆಯಿತು. ಸಂಬಳ ೧೨೦ ರೂಪಾಯಿ. ಇಂಥ ಒಳ್ಳೆ ಕೆಲಸ ಇಷ್ಟು ಬೇಗ ನನಗೆ ದೊರೆಯಬಹು ದೆಂದು ನಾನು ಆಶಿಸಿರಲಿಲ್ಲ. ಹೀಗೆ ಆಕಸ್ಮಾತ್ತಾಗಿ ಈ ಸುದೈವದ ಪ್ರಸಂಗ ತಾನಾಗಿ ಬಂತು. ಚಿತ್ರಮಂದಿರದ ಮಾಲಿಕರು ನಮ್ಮ ವರ್ಕ ಶಾಪಿಗೆ ಬಂದಿದ್ದರು. ಅವರ ಚಿತ್ರಮಂದಿರದಲ್ಲಿಯ ಯಂತ್ರವು ಎಂಟು ದಿನಗಳಿಂದ ನಿಂತು ಹೋಗಿತ್ತು. ಮುಂಬಯಿಯಲ್ಲಿ ಎಲ್ಲಿಯೂ ಅದಕ್ಕೆ ಬೇಕಾಗುವ ಒಂದು ಸಣ್ಣ ಹಲ್ಲಿನ ಚಕ್ರ ಸಿಗದ್ದರಿಂದ ಅವರು ಹೊಸ ದೊಂದನ್ನು ತಯಾರಿಸಿಕೊಡುವುದಾಗಿ ಕೇಳಿದರು. ನಾನು ಎರಡು ದಿನ ಗಳಲ್ಲಿ ಅದನ್ನು ತಯಾರಿಸಿ ಕೊಟ್ಟೆ. ಅವರು ನನ್ನ ಮೇಲೆ ತುಂಬ ಸಂತುಷ್ಟ ರಾದರು. ನನ್ನ ವಿಷಯವಾಗಿ ನಮ್ಮ ಎಂಜಿನಿಯರರಿಗೆ ವಿಚಾರಿಸಿಕೊಂಡರು. ಅವರಿಗೆ ತಮ್ಮ ಥಿಯೆಟರುಗಳ ಯಂತ್ರಗಳನ್ನು ಸರಿಯಾಗಿ ನೋಡಿ ಕೊಂಡು ಹೋಗುವ ಕುಶಲ ಕೆಲಸಗಾರನೊಬ್ಬ ಬೇಕಾಗಿದ್ದ. ನಾನು ಆ ಕೆಲಸಕ್ಕೆ ತಕ್ಕವನೆಂದು ಅವರಿಗೆ ನಂಬಿಕೆಯೆನಿಸಿ, ಅವರು ಕೂಡಲೇ ನನ್ನನ್ನು ನೇಮಿಸಿಕೊಂಡರು. ಇನ್ನು ಎಂಟು ದಿವಸಕ್ಕೆ ನಾನು ಕೆಲಸದ ಮೇಲೆ ರುಜುವಾಗಬೇಕು. ಇಷ್ಟು ದಿವಸ ನೀನು ಕೈಹಿಡಿದಿದ್ದಕ್ಕೆ ಇಂದಿಗೆ ನಾನೊಬ್ಬ ಮನುಷ್ಯನಾದೆ. ನಿನಗೆ ಬರುವ ೪೦ ರೂಪಾಯಿ ಸಂಬಳದಲ್ಲಿ ೧೫ ರೂಪಾಯಿ ನನಗಾಗಿ ಈಗ ೫ ವರ್ಷ ತಪ್ಪದೇ ಪ್ರತಿ ತಿಂಗಳು ಕಳುಹಿಸಿದೆ. ನಾನು ಒಬ್ಬೊಂಟಿಗ; ನೀನು ಮಕ್ಕಳೊಂದಿಗ. ಈ ೨೫ ರೂಪಾಯಿಗಳಲ್ಲಿ ನಿನ್ನ ಸಂಸಾರವನ್ನು ಸಾಗಿಸಿಕೊಂಡು ಹೋಗಲು ನಿನಗೆ ಷ್ಟೊಂದು ಕಷ್ಟವಾಗಿರಬೇಕು? ಎಲ್ಲ ತಾಪತ್ರಯಗಳನ್ನು ನನ್ನ ಮೇಲಿನ ಮಮತೆಯಿಂದ ನುಂಗಿಕೊಂಡು ನನ್ನನ್ನು ಹಾದಿಗೆ ಹಚ್ಚಿದೆ. ನಿನ್ನಂಥ ಅಣ್ಣ ದೊರೆಯುವುದು ಅಪರೂಪ! ಅತ್ತಿಗೆಯೂ ಅಷ್ಟೇ. ನನ್ನ ಮೇಲೆ ಅಂತಃಕರಣವಿಟ್ಟು ನೀನು ಮಾಡುತ್ತಿರುವ ಸಹಾಯಕ್ಕೆ ಎಂದೂ ಅಡ್ಡ ಬರಲಿಲ್ಲ. ನಾನು ಮುಂಬಯಿಯಂಥ ಪಟ್ಟಣದಲ್ಲಿ ೫ ವರ್ಷ ನಿಂತು, ಮೆಕ್ಯಾನಿಕ್, ಫಿಟರ್, ಆಪರೇಟರ್ ಮುಂತಾದ ಕೆಲಸಗಳನ್ನು ಕಲಿತು, ಇಂದು ಇಂಥ ದೊಡ್ಡ ಸಂಬಳದ ಮೇಲೆ ಹೋಗುತ್ತಿದ್ದೇನೆ. ಇದು ನನ್ನ ಪುಣ್ಯವಲ್ಲ, ನಿನ್ನ ಪುಣ್ಯ. ಈ ಋಣವನ್ನು ನಾನು ಹ್ಯಾಗೆ ತೀರಿಸುವೆನೊ ಕಾಣೆ—ನನಗೆ ಸಂಬಳ ಪ್ರಾರಂಭವಾದ ಕೂಡಲೆ, ನಾನು ಸಾಧ್ಯವಾದಷ್ಟು

ನಿನಗೆ ಕಳುಹಿಸಿಕೊಡುತ್ತೇನೆ. ದುಡ್ಡಿನಿಂದ ನಿನ್ನ ಋಣ ಎಂದಿಗೂ ತೀರ ದೆಂಬುದನ್ನು ನಾನು ಬಲ್ಲೆ. ಆದರೂ ನನಗೆ ಸರಿತೋರಿದ ರೀತಿಯಲ್ಲಿ ನಾನದನ್ನು ತೀರಿಸಲು ಯತ್ನಿಸುತ್ತೇನೆ.

ಇನ್ನು ನಾನು ಇಲ್ಲಿಂದ ಹೊರಡುವ ವಿಷಯ. ಅದಕ್ಕೆ ಇನ್ನು ಎಂಟೇ ದಿನಗಳು ಉಳಿದವು. ಐದು ವರ್ಷಗಳ ನಂತರ ಈಗ ನಾನು ಮುಂಬಯಿ ಬಿಡುತ್ತಾ ಇದ್ದೇನೆ-ಹೋಗುತ್ತಿರುವುದೂ ಒಂದು ದೊಡ್ಡ ಕೆಲಸದ ಮೇಲೆ. ನನ್ನ ಸ್ನೇಹಿತರೆಲ್ಲ ಚಹಾ ಪಾರ್ಟಿಗಾಗಿ ಪೀಡಿಸುತ್ತಿದ್ದಾರೆ. ನನ್ನ ಯೋಗ್ಯತೆ ಯಿಲ್ಲವಿದ್ದರೂ ಸ್ವಲ್ಪಾದರೂ ಮಾಡಲೇಬೇಕಾಗುವದು. ಆ ಮೇಲೆ ಇಲ್ಲಿ ತುಸು ಕೊಡುಕೊಳ್ಳಿ ಇದೆ. ನಾನು ಕಾಯಮಾಗಿಯೇ ಈ ಊರು ಬಿಡುವವ. ಚಿಲ್ಲರೆ ಬಾಕಿಗಳನ್ನು ಇಡುವುದಕ್ಕಾಗುವುದಿಲ್ಲ. ಹೀಗೆ ಕನಿಷ್ಠ ೫೦ ರೂ ಗಳಾದರೂ ನನಗೆ ಕೂಡಲೇ ಬೇಕಾಗಿವೆ. ಇಷ್ಟು ಹ್ಯಾಗಾದರೂ ಮಾಡಿ ಕಳಿಸಬೇಕು. ಇನ್ನು ಮುಂದೆ ನಾನು ನಿಮಗೆ ಕೇಳುವ ಹಾಗಿಲ್ಲ. ಸೊಲ್ಲಾ ಪುರಕ್ಕೆ ಹೋದ ಮೇಲೆ-ಸಂಬಳ ಕೈಯಲ್ಲಿ ಬರುವುದಕ್ಕೂ ಒಂದು ತಿಂಗಳು ಬೇಕಾಗುವುದು—ಪರಸ್ಥಳದಲ್ಲಿ ಹೋದ ಕೂಡಲೆ ಕೇಳುವುದು ಸರಿಯೆನಿ ಸುವುದಿಲ್ಲ. ಕೆಲಸಕ್ಕೆ ಹಾಜರಾದ ನಂತರ ಪತ್ರ ಬರೆಯುತ್ತೇನೆ.

ಪುಟ್ಟನ ಮೈಯಲ್ಲಿ ಈಗ ಹ್ಯಾಗಿದೆ ತಿಳಿಸಬೇಕು. ನಿಮ್ಮ ಉತ್ತರ ವನ್ನೇ ನಿರೀಕ್ಷಿಸುತ್ತಿರುವ,

ತಮ್ಮ—ಉಪೇಂದ್ರ."

ಕಾಗದವನ್ನು ಲಕೋಟೆಯಲ್ಲಿ ಸೇರಿಸುತ್ತ ಪ್ರಹ್ಲಾದ ಅಂದ-"ಉಂ, ಏನು ಮಾಡೋದೀಗ?"

ದ್ರೌಪದಿಗೆ ಈಗ ಹೊಟ್ಟೆಯಲ್ಲಿ ಕಳವಳಿಸಿ ಬಂದಿತ್ತು—"ನಾನೇನು ಹೇಳಲಿ? ನೀವು ಅಣ್ಣ, ಅವರು ತಮ್ಮ, ಸಾಲ ಮಾಡ್ರಿ, ಕಳಿಸ್ರಿ."

ಪ್ರಹ್ಲಾದ ಈ ಮಾತಿಗೆ ಬದಲು ಮಾತಾಡಲಿಲ್ಲ. ಅವನ ತಲೆಯ ಲ್ಲಿಯೂ ವಿಚಾರದ ಬಿರುಗಾಳಿ ಎದ್ದಿತ್ತು. ಮುಂಚೆ ಅವನೇ ಒಂದು ನಿರ್ಣಯಕ್ಕೆ ಬರುವುದು ಅಗತ್ಯವಾಗಿತ್ತು. ಧೋತರದ ಚುಂಗು ತೆಗೆದು ಮೋರೆಯನ್ನೊರಸಿಕೊಂಡ. ಬೆವರು ಬರುತ್ತಲೇ ಇತ್ತು. ಎದ್ದು ಬಚ್ಚಲು ಮನೆಗೆ ಹೋದ. ದ್ರೌಪದಿ, ಮಗಳು ಮಲಗಿದ್ದ ಕೋಣೆಗೆ ಬಂದಳು.

ಪುಟ್ಟು ಸಿದ್ದೆಯಲ್ಲಿದ್ದಳು. ಅವಳ ಮಗ್ಗುಲಲ್ಲಿ ಕುಳಿತು ದುಪ್ಪಟಿಯನ್ನು ಸರಿಯಾಗಿ ಹೊಚ್ಚಿದಳು. ಈಗ ನಾಲ್ಕು ತಿಂಗಳಿಂದ ಆ ಹುಡುಗೆ ಬೇನೆಯನ್ನು ಅನುಭವಿಸುತ್ತಿದ್ದಳು. ಮೊದಲು ಮೈಲಿಯಿಂದ ಪ್ರಾರಂಭವಾಯಿತು ಚಳಿಜ್ವರ ಸೇರಿಕೊಂಡಿತು. ಈಗ ಕಾಮಿಣಿಯಾಗಿ ಮೈ ಅರಿಷಣಕ್ಕಿಳಿದಿದೆ. ಲಿವರ್ ಬೆಳೆದಿದೆ— ಮೈ ಕಾಣಿಸದ ಹಾಗೆ ಖಜ್ಜಿ ಎದ್ದು ಕೀವು ತುಂಬಿಕೊಂಡಿದೆ. ದ್ರೌಪದಿ ೧೫ ದಿನಗಳಿಂದ ಗಂಡನಿಗೆ ಹೇಳುತ್ತಿದ್ದಾಳೆ— ಡಾಕ್ಟರನನ್ನು ಕರೆತಂದು ತೋರಿಸಿರಿ ಎಂದು. ಈ ನಾಲ್ಕು ತಿಂಗಳಲ್ಲಿ ಔಷಧಿಗಾಗಿ ಸುಮಾರು ಐವತ್ತು ಅರವತ್ತು ರೂಪಾಯಿ ಅವನು ಖರ್ಚು ಮಾಡಿದ್ದ. ಒಂದೆರಡು ಸಲ ಡಾಕ್ಟರರೂ ಮನೆಯವರೆಗೆ ಬಂದು ಹೋಗಿದ್ದರು. ಆದರೆ ಆಗಾಗ್ಗೆ ಕರೆತರುವಷ್ಟು ದುಡ್ಡಿನ ತ್ರಾಣ ಅವನಲ್ಲಿರಲಿಲ್ಲ. ಇತ್ತೀಚೆಗೆ ಡಾಕ್ಟರರ ಔಷಧಿಯನ್ನು ಬಿಟ್ಟು ಅವರು ಇವರು ಹೇಳುವ ಕಾಷ್ಠ, ಕಷಾಯಗಳ ಮೇಲೆಯೇ ನಡೆದಿತ್ತು. ಅದರಲ್ಲಿ ತಿಂಗಳು ಮುಗಿಯುವ ದಿವಸಗಳು. ಹತ್ತಿರ ಒಂದೆರಡು ರೂಪಾಯಿ ಮಾತ್ರವೇ ಇದ್ದುವು. ಈ ಸ್ಥಿತಿಯಲ್ಲಿ ಡಾಕ್ಟರನನ್ನಾದರೂ ಕರೆತರುವುದು ಹ್ಯಾಗೆ? ಅವನು ಬಂದನೆಂದರೆ ಅವನ ಕೈಯಲ್ಲಿ ಮೂರು ರೂಪಾಯಿ ಹಾಕಬೇಕು, ಔಷಧಿಗೆ ಕೊಡಬೇಕು, ಮೇಲೆ ಪಥ್ಯದ ಖರ್ಚು ನೋಡಿಕೊಳ್ಳಬೇಕು. ದ್ರೌಪದಿಗೆ ಇದರ ಅರಿವು ಇದ್ದಿಲ್ಲವೆಂತಲ್ಲ. ಆದರೂ ಅವಳಿಗೆ ಮಗು ಕಷ್ಟಪಡುವುದನ್ನು ನೋಡುವುದಾಗುತ್ತಿರಲಿಲ್ಲ. ಗಂಡ ಬೆಳಗಿನ ೮ ಗಂಟೆಗೆ ಕೆಲಸಕ್ಕೆ ಹೋದನೆಂದರೆ ಸಾಯಂಕಾಲ ೬ ಗಂಟೆಗೆ ಬರುತ್ತಿದ್ದ. ಅವನು ಹೋಗುವ ಹೊತ್ತಿಗೆ ಅಡಿಗೆ ಯಾಗಬೇಕು, ಆ ಮೇಲೆ ಮನೆ ಕೆಲಸಗಳಾಗಬೇಕು. ಮಗುವಿನ ಆರೈಕೆಯಾಗಬೇಕು, ಸಾಲೆಗೆ ಹೋಗುವ ಸುಮ್ಮಿಯ ಸಿದ್ಧತೆ ಆಗಬೇಕು, ಪಾಪ, ಪ್ರಹ್ಲಾದನಿಗೂ ಹಾಗೇ ಕಷ್ಟವಿತ್ತು. ಸಕ್ಕರೆ ಕಾರಖಾನೆಯಲ್ಲಿ ೧೦ ತಾಸು ಮೈ ದಣಿಸಿ ದುಡಿಯುತ್ತಿದ್ದ. ಮನೆಯಲ್ಲಿ ತರುಬರುವುದನ್ನು ನೋಡುತ್ತಿದ್ದ. ಉಳಿದ ಹೊತ್ತಿನಲ್ಲಿ ಮಗುವಿನ ಆರೈಕೆಯಲ್ಲಿ ಹೆಂಡತಿಗೆ ನೆರವಾಗುತ್ತಿದ್ದ.

ಕಾರಖಾನೆಯ ಜನರಿಗೆ ಕಾಳುಕಡಿ ಅಗ್ಗವಾಗಿ ದೊರೆಯುತ್ತಿದ್ದವು. ಅದೊಂದು ಕ್ಷೇಮವಾಗಿತ್ತು. ಇಲ್ಲವಾದರೆ ೨೫ ರೂಪಾಯಿಯಲ್ಲಿ ನಾಲ್ಕು ಜನರ ಹೊಟ್ಟೆ ತುಂಬುವುದು ಸಾಧ್ಯವೇ ಇರಲಿಲ್ಲ. ಆದರೂ ಅವನಿಗೆ

ತುಂಬ ಕಷ್ಟವಾಗುತ್ತಿತ್ತು. ತಮ್ಮನಿಗೆ ಕಳಿಸುವ ೧೫ ರೂಪಾಯಿ ತನಗೇ ಉಳಿದಿದ್ದರೆ ೨ ಸೇರು ಬೆಣ್ಣೆ ಹೆಚ್ಚು ತಕ್ಕೊಳ್ಳಬಹುದಾಗಿತ್ತು. ವಾರದಲ್ಲಿ ಎರಡು ದಿನ ಚಪಾತಿ ಮಾಡಿ ಉಣ್ಣಬಹುದಾಗಿತ್ತು. ಮಕ್ಕಳಿಗೆ ಮೈ ತುಂಬ ಅರಿವೆ ಹಾಕಬಹುದಾಗಿತ್ತು. ಮತ್ತೇನೇನನ್ನೊ ಮಾಡಬಹುದಾಗಿತ್ತು. ಇವುಗಳೆಲ್ಲ ದುಬಾರಿ ಖರ್ಚುಗಳಲ್ಲ. ಆದರೆ ಅವುಗಳನ್ನು ಮಾಡುವದು ಅವನಿಗೆ ಸಾಧ್ಯವಾಗುತ್ತಿರಲಿಲ್ಲ ಅವನು ತಮ್ಮನಿಗೆ ಮಾತು ಕೊಟ್ಟಿದ್ದ. ತನಗೆ ಎಷ್ಟೇ ಕಷ್ಟವಾಗಲಿ, ಏನೇ ಅನನುಕೂಲಗಳು ಬರಲಿ, ತಿಂಗಳಿಗೆ ೧೫ ರೂಪಾಯಿ ಕಳಿಸುತ್ತೇನೆ ಎಂದು. ತಮ್ಮನಲ್ಲಿ ಅವನು ಬಹಳ ಆಸೆಗಳನ್ನು ಇಟ್ಟುಕೊಂಡಿದ್ದ. ನಾಳೆ ಉಪೇಂದ್ರ ಕಲಿತು ಪಾಸಾದ ಮೇಲೆ ತಾವಿಬ್ಬರೂ ಕೂಡಿಯೇ ಇರಬೇಕು, ಇಬ್ಬರೂ ಗಳಿಸಬೇಕು, ಸ್ವತಂತ್ರವಾದ ಒಂದು ಉದ್ಯೋಗ ಆರಂಭಿಸಬೇಕು, ಪ್ರತಿಷ್ಠೆ ಸಂಪಾದಿಸಬೇಕು, ಮನೆ ಕಟ್ಟಬೇಕು, ಇಂಥ ಹಲವು ಆಕಾಂಕ್ಷೆಗಳು ಕಲ್ಪನಾ ಸೃಷ್ಟಿಯಲ್ಲಿ ಮೈ ತಳೆದು ದಿನಾಲು ಅವನ ಕಣ್ಣೆದುರು ನಿಲ್ಲುತ್ತಿದ್ದವು. ದ್ರೌಪದಿಗೆ ಗಂಡನ ಈ ಆಶೆಗಳಲ್ಲಿ ಅಷ್ಟೊಂದು ನಂಬಿಕೆಯಿರಲಿಲ್ಲ. ಆದರೂ ಪ್ರತಿ ತಿಂಗಳು ತನ್ನ ಗಂಡನು ಕಳಿಸುವ ರೂಪಾಯಿ, ಕಳಿಸಲೇಕೂಡದು, ಎಂದು ಹಟ ಹಿಡಿದು ಮಾತ್ರ ಅವಳೆಂದೂ ಕೂಡಲಿಲ್ಲ.

ಮುಖ ತೊಳೆದುಕೊಂಡು ಒಂದು ಪ್ರಹ್ಲಾದ ಪುಟ್ಟನ ಇನ್ನೊಂದು ಮಗ್ಗಲಿಗೆ ಕುಳಿತ.

‘ ಎಷ್ಟು ಹೊತ್ತಾಯಿತು ಮಗುವಿಗೆ ನಿದ್ರೆ ಹತ್ತಿ?”

‘ ಆಯಿತು, ಅರ್ಧ ಗಂಟೆ ”

“ಕರಕಿನ ಪುಡಿ ಹಚ್ಚಿದ್ದೀಯಾ ಮೈಗೆ? ಅದರಿಂದ ಏನಾದರೂ ಗುಣ ?”

“ತುಸು ಒಣಗಿದಂತಾಗಿದೆ. ಇನ್ನೆರಡು ದಿನ ಹಚ್ಚಿ ನೋಡಬೇಕು. ಏನೇ ಆದರೂ ಕೂಸು ದಿನಕ್ಕೂ ನಿತ್ರಾಣವಾಗುತ್ತ ನಡೆಯಿತು. ನನಗಂತೂ ಯಾಕೊ ಹೆದರಿಕೆ ಆಗುತ್ತಾ ಇದೆ. ಬದುಕಿ ಬಾಳಿದರೆ ಪುನರ್ಜನ್ಮವೆಂದೇ ಹೇಳಬೇಕು. ನೀವೇನು ಡಾಕ್ಟರಿಗಾಗಲಿ ವೈದ್ಯರಿಗಾಗಲಿ, ಕರೆತಂದು ತೋರಿಸುವ ಹಾಗಿಲ್ಲ. ಅದರ ಅದೃಷ್ಟದಲ್ಲಿ ಔಷಧವಿಲ್ಲದೆ ಸಾಯುವುದಿದ್ದರೆ ಯಾರೇನು ಮಾಡುವ ಹಾಗಿದೆ.”

ದ್ರೌಪದಿಯ ಕಣ್ಣುಗಳಿಂದ ಅಶ್ರುಗಳು ಹೊರಬಂದವು.

"ಈಗ ನನ್ನ ಹತ್ತಿರ ಇರುವುದು ಎರಡೇ ರೂಪಾಯಿ, ಇದರ ಮೇಲೆ ಎಂಟು ದಿನ ಕಳೆಯಬೇಕು."

"ಹಾಗಾದರೆ ತಮ್ಮ ಬರೆದಿದ್ದಾರಲ್ಲ—ಅದಕ್ಕೇನು ಮಾಡುವಿರಿ?"

"ಬಂದಿರುವ ಕಷ್ಟ ಅದೇ ಈಗ."

"ಹಾಗಾದರೆ ಸಾಧ್ಯವಿಲ್ಲ ಎಂದು ಬರೆಯುತ್ತೀರಾ?"

"ಹಾಗೆ ಬರೆದರೆ ಇದುವರೆಗೆ ಮಾಡಿದ್ದೆಲ್ಲ ವ್ಯರ್ಥವಾಗುವುದು."

"ಹಾಗಾದರೆ ಕಳುಹಿಸಿ ಕೊಡ್ರಿ. ಇಲ್ಲಿ ಮಗು ಔಷಧವಿಲ್ಲದೆ ಸತ್ತರೆ ಸಾಯಲಿ."

"ದ್ರೌಪದಿ, ಅದು ನಿನಗೇ ಮಗು, ನನಗೆ ಮಗು ಅಲ್ಲವೇ ? ಈಗ ನಾಲ್ಕು ತಿಂಗಳಿಂದ ಬೇನೆಯನ್ನು ಅನುಭವಿಸುತ್ತಿರುವ ಕೂಸು ಇಂದು ಡಾಕ್ಟರು ಬಂದಾಕ್ಷಣಕ್ಕೇ ಒಮ್ಮೆಲೆ ಎದ್ದು ಓಡಾಡುತ್ತದೆಯೇ? ಕಾಲಾವಧಿಯಿಂದ ಬಂದ ಜಡ್ಡು ಕಾಲಾವಧಿಯಿಂದಲೇ ಗುಣವಾಗಬೇಕು. ಸಂಬಳ ಕೈಯಲ್ಲಿ ಬಂದಕೂಡಲೆ ಏನಾದರೂ ಮಾಡೋಣ."

"ಆಗಲಿ. ಹಾಗೇ ಮಾಡಿರಿ. ಅದುವರೆಗೆ ಅದು ಬದುಕಿದರೆ ಮುಂದಿನ ಮಾತು. ಈಗ ದುಡ್ಡಿಗಾಗಿ ಅಲ್ಲಿ ತಮ್ಮನ ಪ್ರಾಣ ಹೋಗತಾ ಇದೆ. ಅದನ್ನು ಮೊದಲು ಉಳಿಸಿರಿ. ಕೂಸು ಹೋದರೆ ಇನ್ನೊಂದು ಬರಬಹುದು. ತಮ್ಮ ಸಿಗಲಾರ!"

ಇಂಥ ಚುಚ್ಚು ಮಾತು ದ್ರೌಪದಿ ಎಂದೂ ಆಡಿರಲಿಲ್ಲ. ಆದರೆ ಇಂದು ಅವಳ ಬಾಯಿಂದ ಅದು ಕಿಚ್ಚಿನಂತೆ ಬಂದುಬಿಟ್ಟಿತು. ಆಡಿದ ಮೇಲೆ ಅವಳಿಗೆ ವಿಚಾರ ಬರಹತ್ತಿತು— ಮಾತು ಬಹಳ ಹೆಚ್ಚಾಯಿತು ಎಂದು. ಬೇರೆ ಪ್ರಸಂಗದಲ್ಲಿ ಇಂಥ ಮಾತು ಅವಳ ಬಾಯಿಂದ ಬಂದಿದ್ದರೆ ಪ್ರಹ್ಲಾದ ಏನು ಮಾಡುತ್ತಿದ್ದನೊ ಏನೊ! ಆದರೆ ಈಗ ಅವನು, ಮಗುವಿನ ಮೇಲಿನ ಮಮತೆಯಿಂದ ಹೆಂಡತಿ ಹೀಗೆ ಮಾತಾಡುತ್ತಿದ್ದಾಳೆ ಎಂದುಕೊಂಡ.

"ನೀನು ಆಡಿದ ಮಾತಿಗೆ ನನಗೆ ಸಿಟ್ಟಿಲ್ಲ. ಇದೊಂದು ಕೊನೆಯ ಸಲ ನಾವು ಕಳಿಸಬೇಕಾಗುವುದು. ನೀನೂ ತುಸು ವಿಚಾರ ಮಾಡು. ತನ್ನ ಸಂಬಳ ಬಂದಮೇಲೆ ನಮ್ಮ ರೂಪಾಯಿಗಳನ್ನು ಅವನು ಕೊಡಬಹುದು."

"ಕಳಿಸಿರಿ. ಬೇಡ ಎಂದು ನಾನೆಲ್ಲಿ ಹೇಳುತ್ತೇನೆ. ಹೌದು, ಕಳಿಸುವುದಕ್ಕಾದರೂ ಕೈಯಲ್ಲಿ ಬೇಕಲ್ಲ?"

"ಅದೇ, ನನಗೂ ಯಾವ ಹಾದಿಯೂ ತೋಚದಾಗಿದೆ."

ಕೆಲಹೊತ್ತು ಇಬ್ಬರೂ ಸುಮ್ಮಗೆ ಕುಳಿತರು. ಅಷ್ಟರಲ್ಲಿ ಸಾಲೆಯಿಂದ ಬಂದ ಸುಮ್ಮಿ 'ಅವ್ವಾ, ಅವ್ವಾ' ಎಂದು ಕೂಗಹತ್ತಿದಳು.

"ಅರಚಬೇಡ. ಪುಟ್ಟಿ ಮಲಗಿದೆ. ಅಡಿಗೆಮನೆಯಲ್ಲಿ ತಿನ್ನುವುದಕ್ಕೆ ಇಟ್ಟಿದ್ದೇನೆ, ಹೋಗು. ನಿಮಗೇನಾದರೂ ಬೇಕೊ? ಇಲ್ಲೇ ಬೇಕಾದರೆ ಇರುತ್ತೇನೆ."

"ಈಗೇನೂ ಬೇಡ. ಇದು ನೋಡು— ಹೀಗೊಂದು ವಿಚಾರ ಬಂದಿದೆ. ಕೈಗಡ ಕೇಳಿದರೆ ಯಾರೂ ಕೊಡುವುದಿಲ್ಲ. ಸಾಲ ಕೇಳಿದರೆ ವಸ್ತ ಇಡಬೇಕು ಎನ್ನುತ್ತಾರೆ. ಅದಕ್ಕೆ ಹೀಗೆ ಮಾಡೋಣ. ಪುಟ್ಟಾನ ಬಂಗಾರದ ಚೇನ್ (ಸರಪಳಿ) ಇದೆಯಲ್ಲ—ಅದು ಮತ್ತು ನಿನ್ನ ಮೊಗ್ಗಿಯ ಮಾಲೆ ಎರಡನ್ನೂ ಅಡುವಿಟ್ಟರೆ ಎಪ್ಪತ್ತು ಎಂಬತ್ತು ರೂಪಾಯಿ ದೊರೆಯಬಹುದು. ಅವನಿಗೆ ಕಳುಹಿಸಲಿಕ್ಕೂ ಆಯಿತು, ಮಗುವಿನ ಔಷಧಕ್ಕೂ ಆಯಿತು. ಅವನಿಂದ ರೂಪಾಯಿ ಬಂದ ಕೂಡಲೆ ವಸ್ತ ಬಿಡಿಸಿಕೊಂಡು ಬರೋಣ."

ದ್ರೌಪದಿ ಏನೂ ಮಾತಾಡಲಿಲ್ಲ ಎದ್ದು ಮೂಲೆಯಲ್ಲಿಟ್ಟ ಟ್ರಂಕು ತೆಗೆದು. ಆ ಎರಡು ಒಡವೆಗಳನ್ನೂ ತಂದು ಗಂಡನ ಮುಂದೆ ಚೆಲ್ಲಿದಳು. ದುಃಖ ಒತ್ತರಿಸಿ ಬಂತು. ಅಡಿಗೆಮನೆಗೆ ಹೋಗಿಬಿಟ್ಟಳು. ಪ್ರಹ್ಲಾದ ತುಸು ಹೊತ್ತು ಸುಮ್ಮನೆ ಕುಳಿತಿದ್ದ. ಅಷ್ಟರಲ್ಲಿ ಪುಟ್ಟಾ ನಿದ್ದೆಯಿಂದೆಚ್ಚತ್ತಳು ಕಣ್ಣರಳಿಸಿ ತಂದೆಯನ್ನು ನೋಡಿದಳು. ಅವನ ಹತ್ತಿರ ತನ್ನ ಬಂಗಾರದ ಚೇನು ಕಾಣುತ್ತಿತ್ತು.

"ಅಪ್ಪಾ ನನಗೆ ಅದು ಹಾಕು." ಕ್ಷೀಣಸ್ವರದಲ್ಲಿ ಕೇಳಿದಳು.

"ಈಗ ಬೇಡ ಮಗು, ಮೈಗೆಲ್ಲ ಹಾಯಿ ಆಗಿವೆ. ಅವು ವಾಸಿಯಾದ ಮೇಲೆ ಹಾಕೋಣ."

"ಉಂ, ನನಗೆ ಬೇಕು" ಪುಟ್ಟಾ ಅಳಹತ್ತಿದಳು. ಪ್ರಹ್ಲಾದ ಅವನ್ನು ಎತ್ತಿ ಮರೆಮಾಡಿದರೂ ಪುಟ್ಟಾ ಮರೆಯಲಿಲ್ಲ. ದ್ರೌಪದಿ ಬಂದಳು ಪ್ರಹ್ಲಾದ ಎದ್ದು ಹೊರಗೆ ಹೊರಟುಬಿಟ್ಟ.

ಅಡವಿನಿಂದ ಬಂದದ್ದು ಐವತ್ತು, ಮೇಲೆ ಐದು ರೂಪಾಯಿ. ಆ ರಾತ್ರಿಯೆಲ್ಲ ದ್ರೌಪತಿಯ ಕಣ್ಣೀರ ಧಾರೆ ನಿಲ್ಲಲೇ ಇಲ್ಲ. ಪುಟ್ಟನಂತೂ ಗಳಿಗ್ಗೊಂದು ಸಲ ಅತ್ತತ್ತು ಕೇಳುತ್ತಿದ್ದಳು.

ಮರುದಿನ ಉಪೇಂದ್ರನಿಗೆ ರೂಪಾಯಿ ಕಳಿಸಿ ಆಯಿತು. ಆದರೆ ಡಾಕ್ಟರರೂ ಬರಲಿಲ್ಲ. ಅವರ ಔಷಧವೂ ದೊರೆಯಲಿಲ್ಲ. ಆಯುಷ್ಯದ ಎಳೆ ಗಟ್ಟಿಯಾಗಿತ್ತು. ಪುಟ್ಟಾ ಹೇಗೋ ಬದುಕಿಕೊಂಡಳು.

ನಾಲ್ಕು ತಿಂಗಳು ಕಳೆದುಹೋಗಿವೆ. ಈ ಅವಧಿಯಲ್ಲಿ ಉಪೇಂದ್ರನಿಂದ ಎರಡೇ ಕಾಗದಗಳು ಬಂದಿದ್ದವು. ಅದರಲ್ಲಿ ದುಡ್ಡಿನ ಮಾತೇ ಇರಲಿ ದುಡ್ಡಿರಲಿಲ್ಲ. ಮಾತು ಅಂದರೂ ಬರಿ ಆಶ್ವಾಸನ. ಪ್ರಹ್ಲಾದ ತನ್ನ ಸಂಸಾರದ ಖರ್ಚುಗಳನ್ನು ಎಷ್ಟೆ ಹತೋಟಿಯಿಂದ ಸಾಗಿಸಿದ್ದರೂ ಅದರಲ್ಲಿ ಉಳಿತಾಯುವಿರಲಿಲ್ಲ. ಅಂತೇ ಚೇನು ಬಿಡಿಸಿ ತರುವುದು ಅವನಿಗೆ ಇನ್ನೂ ಸಾಧ್ಯವಾಗಿರಲಿಲ್ಲ

ಎಂದಿನಂತೆ ಪ್ರಹ್ಲಾದ ಅಂದು ಕಾರಖಾನೆಯಿಂದ ೬ ಗಂಟೆಗೆ ಬಂದ. ದ್ರೌಪದಿ ಉಪೇಂದ್ರನದೊಂದು ಪತ್ರವನ್ನು ಅವನ ಕೈಯಲ್ಲಿಟ್ಟಳು. ಓದಿದ. ಮದುವೆ ನಿಶ್ಚಿತವಾಗಿತ್ತು. ಮದುವೆಗೆ ಒಂದೇ ತೀರಬೇಕೆಂದು ಆಗ್ರಹದಿಂದ ಬರೆದಿದ್ದ. ಅಂದಿನಿಂದ ಮೂರನೆ ದಿನವೇ ಸಾಯಂಕಾಲದೊಳಗಾಗಿ ಅವರು ಬಾಗಲಕೋಟೆಯಲ್ಲಿ ಇರಬೇಕಾಗಿತ್ತು.

ಈಗ ನಾಲ್ಕು ತಿಂಗಳ ಹಿಂದೆ ಉಪೇಂದ್ರನ ಪತ್ರ ಬಂದು ಅವರನ್ನು ಯಾವ ತೊಂದರೆಗೆ ಈಡುಮಾಡಿತ್ತೋ, ತುಸು ಭಿನ್ನ ಸಂದರ್ಭದ ಇನ್ನೊಂದು ಅಂಥ ತೊಂದರೆ ಅವರ ಎದುರು ಬಂದು ನಿಂತಿತು. ಅನಪೇಕ್ಷಿತವಾಗಿ ಬಂದ ಈ ಖರ್ಚಿನ ಪ್ರಸಂಗ ಇಬ್ಬರಿಗೂ ಅತ್ಯಂತ ಕಳವಳವನ್ನುಂಟು ಮಾಡಿತು. ತಮ್ಮನ ಮದುವೆ ಎಂದು ಆನಂದಬಡಬೇಕೇ? ಅಥವಾ ದುಡ್ಡಿಲ್ಲದ್ದಕ್ಕಾಗಿ ದುಃಖಿಸಬೇಕೆ? ಈಗ ಆನಂದಕ್ಕಿಂತ ಅವರಿಗೆ ದುಃಖವೇ ಹೆಚ್ಚಾಯಿತು. ಪತ್ರದ ಜೊತೆಗೆ ರೂಪಾಯಿ ಕಳಿಸಿದ್ದರೆ ಎಷ್ಟು ಒಳಿತಾಗುತ್ತಿತ್ತು? ಉಪೇಂದ್ರನಿಗೆ ತಮ್ಮ ಆರ್ಥಿಕ ಅಡಚಣಿ ಗೊತ್ತಿಲ್ಲವೆ? ತನಗಾಗಿ ಕಳುಹಿಸಿದ ರೂಪಾಯಿ ಸಹ ಅವನು ಈಗ ಕೊಡಬಾರದೆ? ಇಬ್ಬರೂ ಗಂಡಹೆಂಡತಿ ಎಷ್ಟೋ ಹೊತ್ತು ಈ ವಿಷಯ ಮಾತನಾಡಿದರು. ಹೊರಡಲು, ಕನಿಷ್ಟ ೨೫ ರೂಪಾಯಿಗಳಾದರೂ ಅವರಿಗೆ ಬೇಕಾಗುತ್ತಿದ್ದವು. ಉಳಿಗೂರೆ ಬೇರೆ ಒಯ್ಯುವುದೂ ಅಗತ್ಯವಾಗಿತ್ತು.

"ನಾವು ಮದುವೆಗೆ ಇರದಿದ್ದರೆ ಸರಿಕಾಣದು. ಎಷ್ಟಾದರೂ ಒಡ-ಹುಟ್ಟಿದ ತಮ್ಮ—ನಾವು ಹೋಗದಿದ್ದರೂ ಮದುವೆ ಆಗಬಹುದು; ಆದರೆ ಕೊನೆಯ ವರೆಗೆ ನನ್ನ ಮೇಲೆ ಮಾತು ಉಳಿಯಬಹುದು. ಏನೆ ಆಗಲಿ, ಹೋಗಿ ಬಂದುಬಿಡೋಣ!" ಪ್ರಹ್ಲಾದ ಎಂದ

"ನೀವೊಬ್ಬರೇ ಹೋಗಿ ಬನ್ರಿ. ನಾವು ತಾಯಿ ಮಕ್ಕಳು ಇರ್ತೀವೆ ಮನೆಯಲ್ಲಿ. ಇಷ್ಟಾಗಿ ನಾನೇನು ನಾಂದಿಗೆ ಕೂಡುವ ಹಾಗಿಲ್ಲ. ಗರ್ಭಿಣಿ ಯಿದ್ದವರು ದೇವರ ಕಾರ್ಯಕ್ಕೆ ಬರುವದಿಲ್ಲವಂತೆ."

"ಇಲ್ಲದಿದ್ದರಿಲ್ಲ, ಹಾಗೇ ಬರುವದಕ್ಕೇನು? ನಾನೊಬ್ಬನೇ ಹೋದರೂ ಕೊಡುವ ಉಡುಗೊರೆ ಕೊಡಲೇ ಬೇಕು. ನಿಮ್ಮ ಗಾಡಿ-ಚಾರ್ಜು ಅಷ್ಟೇ ಹೆಚ್ಚು. ಆದನ್ನು ಬರುವಾಗ ಅವನು ಕೊಟ್ಟೇಕೊಡು-ತ್ತಾನೆ ಉಡುಗೊರೆಯ ಸೀರೆ, ಖಣಗಳನ್ನಂತೂ ಉದ್ದರಿ ತರುತ್ತೇನೆ!"

'ಆದಾಯಿತು. ಗಾಡೀಖರ್ಚು?"

"ಅದಕ್ಕೆ ಹೀಗೆ ಮಾಡಬೇಕು. ಚೇನು ಒತ್ತೆ ಇಟ್ಟುಕೊಂಡ ಸಾವು-ಕಾರ ನನಗೆ ಸ್ವಲ್ಪ ಗುರುತಿನವ. ಆ ವಸ್ತದ ಮೇಲೆ ಇನ್ನೊಂದು ೨೫ ರೂಪಾಯಿ ಕೊಡು ಎಂದು ಕೇಳೋಣ. ಅವನಿಗೆ ಹೀಗೆ ಹೇಳಬೇಕು:— 'ಒಂದು ತಿಂಗಳಲ್ಲಿ ಬಡ್ಡಿ ಸಹಿತ ಎಲ್ಲ ರೂಪಾಯಿ ಕೊಟ್ಟರೆ ನೀವು ಆ ವಸ್ತ ವಾಪಸು ಕೊಡಬೇಕು, ಅದಕ್ಕೆ ತಪ್ಪಿದರೆ ಆ ವಸ್ತ ನಿಮಗೇ ದಕ್ಕು ಎಂದು ತಿಳಿಯಬೇಕು!' ಬರುವಾಗ ನೂರು ರೂಪಾಯಿ ಆದರೂ ಉಪೇಂದ್ರನಿಂದ ಕೇಳಿ ತರುತ್ತೇನೆ; ಅಷ್ಟು ಧೈರ್ಯ ಇದೆ ನನಗ" ನೀನೇನು ಗಾಬರಿಯಾಗಬೇಡ. ಐದು ವರ್ಷ ಕಾಲ ನಾನು ಮಾಡಿದ ಸಹಾಯವನ್ನ ಐದು ತಿಂಗಳಲ್ಲಿ ಉಪೇಂದ್ರ ಮರೆತು ಬಿಡುತ್ತಾನೆಂಬ ಮಾತು ನಾನು ನಂಬಲಾರೆ! ಅವನ ಕಿವಿ ಹಿಂಡಿ ನಾನು ತರಬಹುದು! .

"ಆಗಲಿ. ಸಂತೋಷದ ಹೊತ್ತಿನಲ್ಲಿ ಈ ಸಂತಾಪದ ಮಾತು ಬೇಡ ನೀವು ಹೇಳಿದಂತೆ ಇದ್ದುಬಿಟ್ಟರಾಯಿತು ನೀವು ಹ್ಯಾಗೊ ಹಾಗೇ ನಾನು!"

ಎರಡು ದಿನಗಳಲ್ಲಿ ಎಲ್ಲ ಸಿದ್ಧತೆ ಆಯಿತು. ಹೊರಡುವ ದಿನ ಉಪೇಂದ್ರನಿಂದ ಒಂದು ತಂತಿಯೂ ಬಂತು. ಅದಕ್ಕೆ ಸರಿಯಾಗಿ ಪ್ರಹ್ಲಾದ, ದ್ರೌಪದಿ ಮಕ್ಕಳೊಂದಿಗೆ ಗಾಡಿಯನ್ನು ಹತ್ತಿದರು.

ಒಂದೇ ದಿನದ ಮದುವೆ. ಅದರಲ್ಲಿ ಉಪೇಂದ್ರ ಉತ್ಸವ ಮೂರ್ತಿ. ಪ್ರಹ್ಲಾದ ಬರಿ ಪ್ರೇಕ್ಷಕ ಗಣ. ಅಣ್ಣನೆಂಬ ಮದುವೆಯಲ್ಲಿ ಅವನಿಗೆ ಯಾವ ಹಿರಿಯತನವೂ ಇರಲಿಲ್ಲ. ಈ ಮದುವೆಯನ್ನು ಹೊಂದಿಸಿಕೊಟ್ಟ ಗೃಹಸ್ಥರೇ ಎಲ್ಲ ಕಾರ್ಯವನ್ನು ತಾವೇ ವಹಿಸಿಕೊಂಡು ಜರುಗಿಸಿ ಬಿಟ್ಟರು. ವರದಕ್ಷಿಣೆಯಷ್ಟೆ ಹೆಚ್ಚು--ಉಳಿದದ್ದೆಲ್ಲ ಗೊಂಬೆಯ ಮದು ವೆಯ ಹಾಗೆ....ಮಧ್ಯಾಹ್ನ ಸುರುವಾಗಿ ಮಧ್ಯರಾತ್ರಿಯೊಳಗಾಗಿ ಮುಗಿದು ಹೋಯಿತು. ಪ್ರಹ್ಲಾದ ತಾನು ತಂದ ಉಡುಗೊರೆಯನ್ನು ವಧೂ-ವರ ರಿಗೆ ಕೊಟ್ಟ. ಪ್ರತಿಯಾಗಿ ದೊರೆತದ್ದು ಅವನಿಗೊಂದು ಸೆಲ್ಲೆ, ದ್ರೌಪದಿ ಗೊಂದು ಖಣ, ಮಕ್ಕಳಿಗೆರಡು ಝಗದ ಅರಿವೆ. ಇದಕ್ಕೆಲ್ಲ ಉಪೇಂದ್ರನ ಉಪೇಕ್ಷೆಯೇ ಕಾರಣ ಎಂದು ಪ್ರಹ್ಲಾದ ನೆನೆದುಕೊಂಡ. ತನ್ನೊಡನೆ ತುಚ್ಛತೆಯಿಂದ, ಅಢ್ಯತೆಯಿಂದ ನಡೆದುಕೊಳ್ಳುವ ಉಪೇಂದ್ರ ಮೊದಲಿನ ಉಪೇಂದ್ರನಿರಲಿಲ್ಲ! ಕೆಲಸದ ಉಬ್ಬು, ಹೆಂಡತಿಯ ಮಬ್ಬು ಅವನ ವಿವೇಕವನ್ನು ಹದಗೆಡಿಸಿದ್ದವು. ಆ ಸಮಾರಂಭದಲ್ಲಿ ಪ್ರಹ್ಲಾದ ಮತ್ತು ಅವನ ಹೆಂಡತಿ ಇದ್ದೂ ಇಲ್ಲದಂತೆ ಇದ್ದರು. ಪಾಪ, ಅವರ ನಡೆನುಡಿ ಬಡತನ ಒಡೆದು ಕಾಣುತ್ತಿತ್ತು. ಸಾಹೇಬ್ ಠೀವಿಯಲ್ಲಿದ್ದ ಉಪೇಂದ್ರನ ಮಾನಕ್ಕೆ ಇದು ಸಾಲಲಿಲ್ಲ! ಆಗ ಬೀಗರೇ ಹೆಚ್ಚು ಆತ್ಮೀಯರಾ- ಗಿದ್ದರು.

ಮದುವೆ ಮುಗಿಸಿಕೊಂಡು ಉಪೇಂದ್ರ ಹೆಂಡತಿಯೊಡನೆ ರಾತ್ರಿ ಗಾಡಿಯಿಂದ ಹೊರಟ. ಪ್ರಹ್ಲಾದ ಎರಡು ದಿನ ಸೊಲ್ಲಾಪುರದಲ್ಲಿ ಅವ ನೊಡನೆ ಇದ್ದು ಮುಂದೆ ತನ್ನ ಊರಿಗೆ ಹೋಗುವುದು ಎಂದು ಗೊತ್ತಾ ಗಿತ್ತು. ಎಲ್ಲರೂ ಸ್ಟೇಶನ್ನಿಗೆ ಬಂದರು. ಯಾವುದೋ ಒಂದು ಜಾತ್ರೆಯ ಮೂಲಕ ಗಾಡಿಯಲ್ಲಿ ವಿಪರೀತ ಗದ್ದಲ. ಗಾಡಿ ಬಿಡುವಾಗ ಉಪೇಂದ್ರನ ಭಾವ ನಗುತ್ತ ಅಂದ:— 'ನಿಮಗೆ ಜಾಗ ಸರಿಯಾಗಿ ಸಿಗಲಿಲ್ಲ; ಹನಿಮೂನ್‌ಪಾಗಿ ಹೋಗುವವರು ನೀವು ಕನಿಷ್ಟ. ಇಂಟರಿನಲ್ಲಿಯಾದರೂ ಹೋಗಬೇಕಿತ್ತು!"

"ನಮ್ಮ ಹಿಂದೆ ಅಣ್ಣನ ಈ ಜೊಂಜಾಟ ಇರದಿದ್ದರೆ ನಾವಿಬ್ಬರೂ ನಿಜವಾಗಿ ಸೆಕಂಡ್ ಕ್ಲಾಸಿನಲ್ಲಿ ಹೋಗುತ್ತಿದ್ದೆವು. ಸೊಲ್ಲಾಪುರಕ್ಕೆ ಹೋದ

ಮೇಲೂ ಅವರು ಎರಡು ದಿನ ಇರುವವರಿದ್ದಾರೆ. ಅದಾದರೂ ತಪ್ಪಿದರೆ ಒಳಿತಾದೀತು."

ಉಪೇಂದ್ರ ಈ ಮಾತನಾಡುವಾಗ ಪ್ರಹ್ಲಾದ ಅವನ ಹಿಂದೆಯೆ ನಿಂತಿದ್ದ. ಅದನ್ನು ಉಪೇಂದ್ರ ನೋಡಿರಲಿಲ್ಲ. ಅವನ ಮಾತು ಪ್ರಹ್ಲಾದನ ಹೊಟ್ಟೆಯಲ್ಲಿ ಚೂರಿಯಂತೆ ಸೇರಿಕೊಂಡಿತು. ಅದುವರೆಗೆ ಆದ ಅನಾದರವನ್ನು ಅವನು ಹೇಗೋ ಸಹಿಸಿಕೊಂಡಿದ್ದ; ಆದರೆ ಈ ಮಾತು ಮಾತ್ರ ಅವನಿಗೆ ಅತೀವ ದುಃಖವನ್ನುಂಟು ಮಾಡಿತು. ಅವನು ನಿದ್ದೆಯ ಸೋಗು ಮಾಡಿ ಮುಖಕ್ಕೆ ಮುಸುಕು ಹಾಕಿದವನು ಸೊಲ್ಲಾಪುರ ಬರುವವರೆಗೆ ತೆಗೆಯಲೇ ಇಲ್ಲ. ಮುಸುಕಿನ ಎಷ್ಟೋ ಭಾಗ ಕಣ್ಣೀರಿಂದ ತೊಯಿದು ತೊಯಿದು ಆರುತ್ತಿತ್ತು. ಅದನ್ನು ನೋಡುವುದಕ್ಕೆ ಉಪೇಂದ್ರನೆಲ್ಲಿ ಎಚ್ಚರದಿಂದಿದ್ದ ?

ಕೊನೆಗೆ ಊರು ಬಂತು. ಎಲ್ಲರೂ ಗಾಡಿಯಿಂದಿಳಿದರು. ಪ್ರಹ್ಲಾದ ಉಪೇಂದ್ರನಿಗೆ ಹೇಳಿದ: ತಾವು ಹಾಗೇ ಮುಂದೆ ಹೋಗುವವರು—ಎಂದು.

"ಎಲಾ, ಇದೇನು ? ಎರಡು ದಿನ ಇದ್ದು ಹೋಗುವುದು ಎಂದು ಗೊತ್ತಾಗಿತ್ತಲ್ಲವೆ ?" ಉಪೇಂದ್ರ ಅಚ್ಚರಿಗೊಂಡು ನುಡಿದ.

"ಹೌದು, ಆಗ ಹಾಗೆ ಗೊತ್ತಾಗಿತ್ತು. ಈಗ ಹೀಗೆ ಗೊತ್ತಾಗಲಿ—"

"ನೀನಾಡಿದ್ದು ತಿಳಿಯಲಿಲ್ಲ!"

"ತಿಳಿಯದಿರುವದೇ ಒಳ್ಳೆಯದು. ಬೇರೆ ಏನೂ ಇಲ್ಲ, ನಾವು ಹೊರಡಲೇಬೇಕು. ಕಾರಣ ಕೇಳಬೇಡ—ಬಂದ ಕಾರ್ಯ ಮುಗಿಯಿತು. ಆಯಿತು! ಎರಡು ದಿನ ಇದ್ದಾದರೂ ಮಾಡುವುದೇನು ? ಮನೆಗೆ ಬೀಗ ಹಾಕಿ ಬಂದಿದ್ದೇವೆ. ಕೆಟ್ಟ ಕಾಲ. ಊರಲ್ಲಿರುವದೇ ಒಳ್ಳೆಯದು!"

"ಛೆ, ನೀನು ಎರಡು ದಿನ ಇದ್ದು ಹೋಗು; ಎಲ್ಲರೂ ಬಂದಿದ್ದೀರಿ! ಆಗಾಗ ಬರುವದಕ್ಕೆ ಆಗುವದಿಲ್ಲ!"

"ಆಗ್ರಹ ಮಾಡಬೇಡ. ಒಮ್ಮೆ ನಿರ್ಧಾರವಾದ ಮೇಲೆ ಮುಗಿಯಿತು. ಮತ್ತೆ ಬರುವ ಹಾಗಾದರೆ ಬರುತ್ತೇವಂತೆ! ನಾವು ಜಿ. ಐ. ಪಿ. ಸ್ಟೇಶನಿಗೆ ಹೋಗಿ ಬೇರೆ ಗಾಡಿಯನ್ನು ಹತ್ತುತ್ತೇವೆ. ನೀವಿಬ್ಬರು ಇನ್ನು ಹೋಗಬಹುದು!"

ಆಗ ತಲೆಯ ಮೇಲೊಂದು ಬಲವಾದ ಡೊಣ್ಣೆಯ ಏಟು ಹಾಕಿದಂ-ತಾಯಿತು ಉಪೇಂದ್ರನಿಗೆ ! ಅವನು ಕೆಲವು ನಿಮಿಷ ಸ್ತಂಭಿತನಾಗಿ ನಿಂತ. ತನ್ನಿಂದ ತಪ್ಪು ಯಾವುದೋ ಆಗಿರಬೇಕು, ಆದರೆ ಈಗ ಆ ವಿಚಾರಕ್ಕೆ ನಿಲ್ಲುವುದು ಸರಿಯಾಗಲಾರದು ಎನಿಸಿತವನಿಗೆ. ಇಷ್ಟಾಗಿ ಹೆಂಡತಿಯ ಉಬ್ಬಿನಲ್ಲಿದ್ದ ಅವನು ಬೇರೆ ವಿಚಾರಗಳನ್ನು ತಲೆಯಲ್ಲಿ ಹಾಕಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಮೈ ತುಂಬಿದವರಂತೆ ಅದೆಂಥ ಹುರುಪಿನಲ್ಲಿದ್ದ. ಇಷ್ಟಾಗಿ ಅಣ್ಣನ ಮೇಲಿನ ಅಕ್ಕರತೆಗಿಂತ ಹೆಂಡತಿಯ ಮೇಲಿನ ನಚ್ಚಿನ ಕರೆ ಹೆಚ್ಚು ಆಕರ್ಷಣೀಯವಾಗಿತ್ತು. ಅವನ ಕೈ ಕೂಡಲೆ ಜೇಬಿಗೆ ಹೋಯಿತು. ಏಟಿನಿಂದ ೨೫ ರೂಪಾಯಿ ತೆಗೆದು ಅಣ್ಣನ ಕೈಯ ಲ್ಲಿಟ್ಟ. ಅದನ್ನು ತಕ್ಕೊಳ್ಳುವ ಇಚ್ಛೆ ಇರಲಿಲ್ಲ ಪ್ರಹ್ಲಾದನಿಗೆ; ಆದರೆ ಮಾಡುತ್ತಾನೇನು ? ಅವನ ಹತ್ತಿರ ಗಾಡಿಯ ಚಾರ್ಜಿಗೂ ದುಡ್ಡಿರಲಿಲ್ಲ !

ನವದಂಪತಿಗಳು ಒಬ್ಬರಿಗೊಬ್ಬರು ಹೊಂದಿಕೊಂಡು ಟಾಂಗಾದಲ್ಲಿ ಕುಳಿತರು. ಆ ಸಂದರ್ಭದಲ್ಲಿಯೂ ಹೆಂಡತಿಯ ಅಂಗಸ್ಪರ್ಶ ಎಷ್ಟು ಸುಖ-ಮಯವಾಗಿತ್ತು ಅವನಿಗೆ ಪ್ರಹ್ಲಾದ ಅಂಥ ಮನಸ್ಥಿತಿಯಲ್ಲಿಯೂ ಆ ದಂಪತಿ ಗಳನ್ನು ಕಣ್ತುಂಬ ನೋಡಿದ ! ಉಪೇಂದ್ರನ ತಲೆಯಲ್ಲಿ ಮಾತ್ರ ಆಗ, 'ಮನೆಸೇರಿದ ಮೇಲೆ ತಾವು ಗಂಡ ಹೆಂಡತಿ, ಮಾಡುವದೇನೇನು, ಇರು ವನು ಹ್ಯಾಗೇನು?' ಇವೇ ಸುಖಸ್ವಪ್ನಗಳೇ ಚೆಲ್ಲಾಟವಾಡುತ್ತಿದ್ದುವು.

ಅವನ ಮನೆಯೆಂದರೆ ಅಟ್ಟದ ಮೇಲಿನ ಎರಡು ಕೋಣೆಗಳು ಬಾಗಿಲು ತೆರೆದು ಒಳಗೆ ಬರುವುದೇ ತಡ, ಬಿಗಿಯಾಗಿ ಅವನು ಹೆಂಡತಿಯ ನ್ನಪ್ಪಿಕೊಂಡು ಮನದಣಿಯೆ ಮುತ್ತಿಟ್ಟ. ಆದರೆ ಮತ್ತೆ ಅವನು ಅಟ್ಟವ ನ್ನಿಳಿದು ಮುಖ ತೊಳೆದು ಮೇಲೆ ಬರುವುದರೊಳಗಾಗಿ ಹೆಂಡತಿ ಮುಖ ಹಿಡಿದು ಕುಳಿತಿದ್ದಳು. ಹತ್ತಿರ ಹೋದ,— 'ಮುಟ್ಟಬೇಡರಿ' ಎಂದಳು! ಉಪೇಂದ್ರ ಹಾssssಗೆ ಕುಸಿಬಿದ್ದ !

* * * *

ರಾತ್ರಿ ಒಬ್ಬನೇ ಅವನು ಹಾಸಿಗೆಯ ಮೇಲೆ ಮಲಗಿದ್ದ. ಅಣ್ಣ ಸಿಟ್ಟಾಗಿ ಹೋದ ಪ್ರಸಂಗ ಅವನ ಕಣ್ಮುಂದೆ ನಿಂತಿತು. ಅದು ಮೊದ-ಲ್ಗೊಂಡು, ಹಿಂದೆ ಹಿಂದೆ ಹೋದ ಹಾಗೆಲ್ಲ ಎಷ್ಟು ವಿಷಯಗಳು ಅವನ ಮರೆವಿನಲ್ಲಿ ಮುಚ್ಚಿಕೊಂಡಿದ್ದುವು ! ಈಗ ಅದರ ಪ್ರದರ್ಶನವೇನ್ನೆ ಅವನ

ಎದುರು ನಿಲ್ಲಿಸಿದ ಹಾಗಾಯಿತು. 'ಅಣ್ಣನ ವಿಷಯದಲ್ಲಿ ತಾನು ನಡೆದು ಕೊಂಡ ರೀತಿ ಸರಿಯೇ' ಎಂಬ ವಿಚಾರ ಬಂದಾಗ ಗುಡ್ಡದಂಥ ತನ್ನ ತಪ್ಪುಗಳನ್ನು ತಾನು ಕಡ್ಡಿಯಂತೆ ಭಾವಿಸಿ ಕಸದಲ್ಲಿ ಗೂಡಿಸಿದುದು ಅವನಿಗೆ ನಾಚಿಕೆಯನ್ನುಂಟು ಮಾಡಿತು. ಆದರೆ ಅಣ್ಣ-ಅತ್ತಿಗೆಯವರನ್ನು ಆಗ ಕರೆ-ತರಲು ಸಾಧ್ಯವಿತ್ತೆ ? ಇರಲಿಲ್ಲ! ತನ್ನ ಆಶೆಯಾದರೂ ಈಡೇರಿತೆ ? ಇಲ್ಲ. ತಾನು ಅವಿವೇಕಿಯಾಗಿ ಆಡಿದ ಮಾತು, ನಡೆದ ರೀತಿ ಮಾತ್ರ ಅಣ್ಣನ ಅಂತಃಕರಣದಲ್ಲಿ ಅದೆಂಥ ಗಾಯುಗಳನ್ನು ಮಾಡಿತು ? ಈ ವಿಚಾರ ಬರು-ತ್ತಿರುವಾಗಲೆ ಅವನು ನಿದ್ರೆಗೊಳಗಾದ.

ಮರುದಿನವೇ ಅವನಿಂದ ಪ್ರಹ್ಲಾದನಿಗೆ ಒಂದು ಪತ್ರ ಹೋಯಿತು. ಅದರ ಜೊತೆಗೆ ನೂರು ರೂಪಾಯಿಯ ಒಂದು ನೋಟು ಇತ್ತು !

# ಗರತಿಯಾಗುವ ಆಶೆ !

ಶಾಲೆಯಲ್ಲಿ ಅಂದು ಕೊನೆಯ ಗಂಟೆ (Period) ನನಗೆ ಕಲಿಸುವುದಿರಲಿಲ್ಲ. ಶಿಕ್ಷಕರ ಕೊಟಡಿಯಲ್ಲಿ ಸುಮ್ಮನೆ ಕುಳಿತಿರುವುದೇನೆಂದೇ ಮನೆಗೆ ಹೊರಟೆ. **ಬೋಗಾರೋಣಿಯೊಳಗಿಂದ** ಬರುವಷ್ಟರಲ್ಲಿ, ನನ್ನ ಮುಂದೆ ತುಸು ಅಂತರದ ಮೇಲೆ, ಒಬ್ಬ ತರುಣಿ ಹೊರಟಿದ್ದಳು. ಅವಳಿಂದ ಸ್ವಲ್ಪ ದೂರದಲ್ಲಿ ಮಧ್ಯಮ ವಯಸ್ಸನ್ನು ಸುಮಾರಾಗಿ ಮೀರಿದ ಮಡಿಯಾದ ಹೆಣ್ಣುಮಗಳೊಬ್ಬಳು ನಡೆದಿದ್ದಳು. ಅವರು ಯಾವ ಕಡೆಯಿಂದ ಬಂದರೊ ನನಗೆ ತಿಳಿಯಲಿಲ್ಲ. ಈ ಬೀದಿಯಲ್ಲಿ ನಾನು ಬಂದೊಡನೆ ಅವರು ಮುಂದೆ ಹೋಗುತ್ತಿರುವುದನ್ನು ಕಂಡೆ. ಹಿಂದುಗಡೆಯಿಂದ ಆ ತರುಣಿಯ ಉಡುಪು,

ನಡಿಗೆ, ಹೆರಳಿನ ಅಂದ, ಬೆನ್ನಿಕಡೆಯ ಮೈಕಟ್ಟು ಇದೆಲ್ಲ ಎಂಥವನಿಗೂ ಒಂದು ಕ್ಷಣ ನೋಡೋಣ ಎನಿಸುವ ಹಾಗಿತ್ತು. ಅರ್ಥಾತ್ ನಾನೂ ಒಮ್ಮೆ ನೋಡಿದೆ. ಅದೂ ಸಹಜವಾಗಿ. ಆದರೆ ನಾನು ನೋಡುವಾಗ, ಅವಳೂ ಮುಖ ಹೊರಳಿಸಿ ನನ್ನನ್ನೊಮ್ಮೆ ನೋಡಿದಳು. ಅವಳಿಗೇನೆನಿಸಿತೋ, ಒಂದೆರಡು ಕ್ಷಣದಲ್ಲಿ ಪುನಃ ತಿರುಗಿ ನೋಡಿದಳು. ಮೊದಲೊಮ್ಮೆ ನೋಡಿದಾಗ ನಿರ್ಹೇತುಕವಾಗಿ ನೋಡಿರಬೇಕು ಎನಿಸಿತು. ಆದರೆ ಎರಡನೆ ಸಲ ನನನ್ನೇ ಸ್ವಲ್ಪ ದಿಟ್ಟಿಸಿ ನೋಡಿದಳು. ಆಗ ಮಾತ್ರ ಇಂಥ ಪ್ರಸಂಗದಲ್ಲಿ ಗಂಡುಸಿನ ಮನಸ್ಸಿನಲ್ಲಿ ಯಾವ ಭಾವನೆ ತಲೆದೋರಬೇಕೋ ಆ ಭಾವನೆ ನನ್ನಲ್ಲಿ ಬಂದು ಬಿಟ್ಟಿತು.

ಅವರ ಮನೆ ಬಂದಿತೇನೊ, ಆ ಮುದಿ ಹೆಣ್ಣುಮಗಳು ಬಲಕ್ಕೆ ತಿರುಗಿದಳು. ರಸ್ತೆಯಿಂದ ನಾಲ್ಕಾರು ಮೊಳದ ಮೇಲೆ, ಸಾಲಾಗಿ ಮೂರು ಮಾಳಿಗೆಯ ಮನೆಗಳು. ಅವುಗಳಿಗೆ ಮನೆಗಳೆನ್ನುವದಕ್ಕಿಂತ ಕೊಟಡಿಗಳೆನ್ನಬಹುದು. ಎರಡರ ಬಾಗಿಲುಗಳು ತೆರೆದಿದ್ದುವು. ಒಂದಕ್ಕೆ ಬೀಗ ಇತ್ತು. ಮುದಿ ಹೆಣ್ಣುಮಗಳು ಬಾಗಿಲನ್ನು ತೆರೆದು ಒಳಗೆ ಹೋದಳು. ಈ ತರುಣಿ ಬಾಗಿಲ ಹತ್ತಿರ ಹೋಗುವ ಹೊತ್ತಿಗೆ ಮಗ್ಗುಲಿನ ಮನೆಯೊಳಗಿಂದ ಒಬ್ಬಾಕೆ ಹೊರಗೆ ಬಂದು ಆಕೆಯೊಡನೆ ಮಾತಿಗೆ ನಿಂತಳು. ಅವಳು ನಿಂತ ಸ್ಥಳಕ್ಕೆ ಸಮಾಂತರ ರೇಷೆಯಲ್ಲಿ ನಾನು ಬಂದಾಗ, ಮತ್ತೊಮ್ಮೆ ನನ್ನನ್ನು ನೋಡಿದಳು. ನಾನು ಕತ್ತು ಹೊರಳಿಸಿ ಅವಳನ್ನೇನು ಆಗ ನೋಡುತ್ತಿರಲಿಲ್ಲ. ನನ್ನ ಮುಖ ಹಾದಿಗೆ ನೇರವಾಗಿದ್ದರೂ ದೃಷ್ಟಿ ಮಾತ್ರ Eyes right ದ ಹಾಗೆ ಬಲಗಡೆಗೆ ಅವಳನ್ನೇ ನೋಡುತ್ತಿತ್ತು. ಹಾಗೇ ಮುಂದೆ ಹೊರಟೆ. ನಾನು ಎಷ್ಟು ಹೊತ್ತು ಅವಳ ಮನಸ್ಸಿನಲ್ಲಿ ಉಳಿದೆನೊ ಗೊತ್ತಿಲ್ಲ. ನನ್ನ ವಿಚಾರದ ಚಕ್ರಕ್ಕೆ ಮಾತ್ರ ಅವಳು ಒಳಿತಾಗಿಯೇ ಚಲನೆ ಕೊಟ್ಟಳು. "ಎಲ್ಲೋ ನೋಡಿದ ಮುಖ ಇದು! ಎಲ್ಲಿ? ಈ ಊರಲ್ಲಿಯಂತೂ ಅಲ್ಲ. ಹಾಗಾದರೆ ಬೇರೆ ಯಾವ ಊರಲ್ಲಿ? ಅವಳೂ ನನ್ನನ್ನು ಎರಡು ಮೂರು ಸಲ ದಿಟ್ಟಿಸಿ ನೋಡಿದಳು. ಬ್ರಾಹ್ಮಣರ ಹುಡುಗಿಯೆಂದು ಕಾಣುತ್ತಾಳೆ. ಆ ಮುದಿಯಾದ ಹೆಣ್ಣುಮಗಳು ಈಕೆಗೆ ತಾಯಿಯೊ, ಸೋದರತ್ತೆಯೊ, ಅಂತೂ ಏನಾದರೊಂದು ಸಂಬಂಧದವಳಾಗಿರಬೇಕು. ಆದರೆ ಆ ನೆರೆಮನೆಯುವಳು? ಅವಳು ಮಾತ್ರ ಸೂಳೆಯಂತೆ

ಕಾಣುತ್ತಾಳೆ! ಅವಳ ನೆರೆಯಲ್ಲಿ ಇವರು! ಇಂಥ ಬೀದಿಯಲ್ಲಿ ಇವರು ಮನೆ ಹಿಡಿಯಲು ಕಾರಣವೇನು? ಇವಳ ಲಗ್ನವಂತೂ ಆಗಿರಲಾರದು. ಹಾಗಿದ್ದರೆ ಗಂಡನಾದವನು ಇಂಥಲ್ಲಿ ಎಂದೂ ಇರಲಾರ. ಹಾಗಾದರೆ ಆಕೆ ವಿಧವೆಯೆ? ಛೆ! ಹಣೆಯಲ್ಲಿ ಕುಂಕುಮ ಇದೆ. ನನ್ನನ್ನು ಅವಳು ಯಾವ ನೋಟದಿಂದ ನೋಡಿದಳು? ಕರೆಯುವ ಕಣ್ಣಿನಿಂದಲೆ? ಛೆ, ಆ ದೃಷ್ಟಿಯಲ್ಲಿ ಅಂಥ ಭಾವವಿರಲಿಲ್ಲ. ಹಿಂದೆ ಎಷ್ಟೋ ಸಲ ನೋಡಿ ಇದ್ದವರು ಕೆಲವು ವರ್ಷಗಳ ಮೇಲೆ ಒಮ್ಮೆಲೇ ಕಣ್ಣಿಗೆ ಬಿದ್ದರೆ ಯಾವ ಒಂದು ಕುತೂಹಲ ಭಾವದಿಂದ ನೋಡಬಹುದೋ-ಅಂಥ ಏನೋ ಒಂದು ಭಾವನೆಯಿಂದ ಅವಳು ನೋಡಿದಳು. ನಾನು ಹಿಂದಕ್ಕೆ ಅಬಲಾಶ್ರಮದಲ್ಲಿ ಕಲಿಸುತ್ತಿರುವಾಗ ಕೆಲವು ಹುಡುಗಿಯರು ನನ್ನ ಕೈಯಲ್ಲಿ ಕಲಿತರು. ಅವರೆಲ್ಲರ ಗುರುತು ನನಗೆ ಚೆನ್ನಾಗಿದೆ. ಇವಳಂತೂ ಅವರ ಪೈಕಿ ಅಲ್ಲ. ಆಶ್ರಮದಲ್ಲಿಯೇ ಕೆಲವು ಓಡಿ ಬಂದ ಹುಡುಗಿಯರಿದ್ದರು. ಅವರಲ್ಲಿ........ ....ಅವರಲ್ಲಿ ಯಾರ್‍ಯಾರಿದ್ದರು? ನಾಗು, ರತ್ನ, ಸೇವಂತಿ— ಈ ಮೂವರಲ್ಲಿ ಇವಳ ಮುಖ ಯಾರ ಹಾಗಿದೆ? ಸರಿ, ಸರಿ, ಇದ್ದರೆ ಇವಳು ಸೇವಂತಿಯೇ ಇರಬೇಕು. ಆದರೆ ಎಷ್ಟೊಂದು ಬದಲಾವಣೆಯಾಗಿದೆ ಇವಳ ಮುಖದಲ್ಲಿ! ಆಗ ಎಷ್ಟು ಲಕ್ಷಣವಾಗಿದ್ದಳು. ಮುಖದಮೇಲೆ ಏನೊಂದು ಕಾಂತಿ, ಎಂಥ ಸವಿನಗೆ! ಏನೆ ಇರಲಿ. ನಾಳೆ ಅವಳನ್ನು ಕಂಡು ಸಮಾಚಾರ ತಿಳಿದುಕೊಳ್ಳೋಣ" ಎಂದು ಆಲೋಚನೆ ಮಾಡಿಕೊಂಡು ಮನೆ ಸೇರಿದೆ.

ಮಾರನೆಯ ದಿನ ಸಾಯಂಕಾಲ ಶಾಲೆ ಬಿಟ್ಟಿತು. ಒಬ್ಬನೆ ಹೊರಟೆ. ಅವಳ ಮನೆಯ ಹತ್ತಿರ ಬಂದೆ. ಬಾಗಿಲು ತೆರೆದಿತ್ತು. ಬಾಗಿಲಲ್ಲಿ ಯಾರೂ ಕಾಣಲಿಲ್ಲ. ಮಗ್ಗುಲಿಗೆ ಒಂದು ಕಿಟಕಿ. ನೋಡಿದೆ, ಅವಳ ಮುಖ ಕಂಡಿತು. "ಏನ್ರಿ ಮಾಸ್ತರರೇ" ಕರೆದಳು. ಎದೆಯಲ್ಲಿ ಒಂದೇ ಕ್ಷಣ ಮಂಜಿನ ಕರಣೆ ಬಿಟ್ಟ ಹಾಗಾಯ್ತು. ಎಡ ಬಲ ನೋಡಿದೆ ಹಾಗೆ ಯಾರಾದರೂ ಇದ್ದರೆ ಹೋಗುವದು ಬಿಡುತ್ತಿದ್ದೆನೆಂತಲ್ಲ. ಅವಳು ಕರೆಯದಿದ್ದರೂ, ಕಣ್ಣಿಗೆ ಬಿದ್ದರೆ ನಾನೇ ಹೋಗಿ ಮಾತನಾಡಿಸುವದು ಎಂದು ನಿರ್ಧರಿಸಿಯೇ ಇದ್ದೆ. ಅವಳೇ ತಾನಾಗಿ ಕರೆದಳು. ಸರಿ— ನೇರವಾಗಿ ಒಳಕ್ಕೆ ಹೋದೆ. ಒಳಗೆ ಕಾಲಿಟ್ಟ ಕೂಡಲೆ ಉದ್ದಕ್ಕೆ ಒಂದು ಪಡಸಾಲೆ. ಎದುರಿಗೆ ಬಾಗಿಲು. ಅದರ ಒಳಭಾಗ ಅಡಿಗೆಮನೆ ಇರಬೇಕು. ಪಡ-

ಸಾಲೆಯ ಪಕ್ಕದ್ದೇ ಕೋಣೆ. ನಾನು ಒಳಗೆ ಬಂದದ್ದನ್ನು ನೋಡಿ ಆಕೆ ಬಾಗಿಲಿಗೆ ಬಂದು 'ಬನ್ರಿ' ಎಂದಳು ಒಳಗೂ ಹೋದೆ. ಗೋಡೆಗೆ ಒರಗಿಸಿಟ್ಟ ಒಂದು 'ಡಬ್ಬಲ್ ಗಾದಿ'ಯ ಹಾಸುಗೆಯ ಸುರುಳಿ. ಮುಂದೆ ಒಂದು ಜಮುಖಾನೆ. ಆಕೆ ಕೂಡಲು ಕೈಮಾಡಿ ತೋರಿಸಿದಳು. ಗಾದಿಗೆ ಆತುಕೊಂಡು ಕುಳಿತೆ. ಅವಳೂ ಜಮುಖಾನೆಯ ಅಂಚಿಗೆ—ಅರ್ಧ ನೆಲದ ಮೇಲೆ, ಅರ್ಧ ಜಮುಖಾನೆಯ ಮೇಲೆ— ಹೀಗೆ ಕುಳಿತಳು. ಕಿಟಕಿಗೆ ಎದುರಾಗಿ ನಾನು ಕುಳಿತಿದ್ದೆ; ನನಗೆ ಎದುರಾಗಿ ಆಕೆ ಕುಳಿತಿದ್ದಳು. ಕೋಣೆಯನ್ನೊಮ್ಮೆ ಸಂಪೂರ್ಣವಾಗಿ ನಿರುಕಿಸಿದೆ. ಸುಮಾರಾಗಿ ಹತ್ತು ಚದರಡಿಯುಳ್ಳ ಕೋಣೆ. ಮಣ್ಣಿನ ಗೋಡೆ, ಅದರ ಮೇಲೆ ಮಣ್ಣಿನದೇ ಮೇಲಾರ ಗೋಡೆಗಳನ್ನು ಮಣ್ಣಿನಿಂದಲೇ ಸಾರಿಸಿದ್ದರು. ಕಿಟಕಿಯಲ್ಲಿ ಒಂದು ಸಣ್ಣ ತೂಗುಗನ್ನಡಿ, ಕುಂಕುಮ ಪೆಟ್ಟಿಗೆ; ಕಿಟಕಿಯ ಮೇಲೆ, ಒಂದು ಪಟ, ಎರಡು ಮೂಲೆಗಳಿಗೆ ದಾರ ಕಟ್ಟಿ ಅದರ ಮೇಲೆ ಪತ್ತಲ, ಬ್ಲಾವುಜುಗಳನ್ನು ತೂಗುಹಾಕಿದ್ದಿತು. ಇದನ್ನೆಲ್ಲ ಒಂದೆರಡು ನಿಮಿಷಗಳಲ್ಲಿ ನೋಡಿ ಮುಗಿಸಿದೆ; ಆ ಮೇಲೆ ಅವಳನ್ನು ನೋಡಿದೆ. ನನ್ನ ಮತ್ತು ಅವಳ ನಡುವೆ ಜರುಗಿದ ಸಂಭಾಷಣೆಯನ್ನು ಇಲ್ಲಿ ಹಾಗೇ ಕೊಡುತ್ತಾ ಇದ್ದೇನೆ:

"ನನ್ನನ್ನು ಒಮ್ಮೆಲೆ 'ಮಾಸ್ತರ್ರಿ' ಎಂದು ಕರೆದೆಯಲ್ಲಾ, ನನ್ನ ಗುರ್ತದೆಯೊ ನಿನಗೆ?"

"ಅಂದರೆ—ನಿಮ್ಮನ್ನು ಬಹಳ ಸಲ ನೋಡಿದ್ದೇನೆ!"

"ಎಲ್ಲಿ?"

"ಅಬಲಾಶ್ರಮದಲ್ಲಿ. ನೀವು ಅಲ್ಲಿ ಕಲಿಸುತ್ತಿರುವಾಗ ನಾನು ಆಶ್ರಮದಲ್ಲಿದ್ದೆ."

"ನನ್ನಿಂದ ಪಾಠ ಹೇಳಿಸಿಕೊಂಡಿದ್ದೀಯಾ?"

'ಇಲ್ಲ. ಆಗ ನಾನು ನರ್ಸ್ ಕೆಲಸ ಕಲಿಯಬೇಕು ಅಂತ ಅಲ್ಲಿದ್ದೆ. ನನ್ನ ಗೆಳತಿಯರೊಡನೆ ನಿಮ್ಮ ಕ್ಲಾಸಿಗೆ ಬಂದು ಒಮ್ಮೊಮ್ಮೆ ಕೂಡುತ್ತಿದ್ದೆ."

"ಓಹೊ, ಸರಿ, ಸರಿ. ನಿನ್ನ ಹೆಸರು ಸೇವಂತಿ ಅಥವಾ ಹೀಗೇ ಏನೋ ಒಂದು ಹೆಸರಿದೆ ಅಲ್ಲವೆ?"

' ಹೌದು. ಸೇವಂತಿಯೆ!"

' ನೀನು ಅಲ್ಲಿ ಬಹಳ ದಿನ ಇರಲಿಲ್ಲ!"

"ಅಷ್ಟೆ ಒಂದು ವರ್ಷ ಇದ್ದೆ. ಅಲ್ಲಿ ಸುಮ್ಮನೆ ಇದ್ದ ಹಾಗಾಯ್ತು. ಕಲಿಯುವದಕ್ಕೆ ಅಲ್ಲಿ ಸರಿಯಾದ ಅನುಕೂಲತೆ ಇರಲಿಲ್ಲ "

"ಹಾಗಾದರೆ ಮುಂದೆ ಎಲ್ಲಿಗೆ ಹೋದೆ?"

"- - - ಗೆ."

"ಅಲ್ಲಿ ಯಾಕೆ?"

"ಇದನ್ನೇ ಕಲಿಯಬೇಕು—ಅಂತ ಹೋದೆ!"

"ಹಾಗಾದರೆ ಕಲಿತು—ಪಾಸಾದೆಯೊ ?"

"ಇಲ್ಲ, ಅಲ್ಲಿಯೂ—ಕಲಿಯುವದಾಗಲಿಲ್ಲ."

"ನಿನ್ನ ಮದುವೆ ಇನ್ನೂ ಆಗಿಲ್ಲವೆ?"

' ಇಲ್ಲ!"

' ಆ ಮುದಿಯಾದವರು ನಿನಗೆ ತಾಯಿಯೆ ?"

"ತಾಯಿ!"

"ನೀನು ಆಶ್ರಮದಲ್ಲಿರುವಾಗ ನಿನ್ನ ತಾಯಿ ನಿನ್ನ ಹತ್ತಿರ ಇರಲಿಲ್ಲ!"

"ಇಲ್ಲ, ನಾನು - - - ಗೆ ಹೋದ ಮೇಲೆ, ಆಕೆಯನ್ನು ಕರೆಯಿಸಿ ಕೊಂಡೆ."

"ಇಷ್ಟು ದಿವಸ ನಿನ್ನ ಮದುವೆ ಅವರು ಹೇಗೆ ಬಿಟ್ಟರು ? ನಿನ್ನಂಥ ರೂಪವಿದ್ದ ಹುಡುಗಿಯ ಮದುವೆ ಸುಲಭವಾಗಿ ಆಗಬಹುದಾಗಿತ್ತು!"

' ಹಾಳು ನನ ಅದೃಷ್ಟ! ಅದರಲ್ಲಿ ಮದುವೆಯ ಸುಖ ಬರೆದಿಲ್ಲ-ವೇನೊ !"

• "ಹಾಗೆ ನೀನು ನಿರಾಶಳಾಗುವ ಕಾರಣವಿಲ್ಲ; ಆದರೆ ನಿಮ್ಮ ತಾಯಿ ಇದುವರೆಗೆ ನಿನ್ನ ಮದುವೆ ಮಾಡದೆ ಯಾಕೆ ಬಿಟ್ಟಳು?"

"ಹೆಣ್ಣುಮಗಳು, ಪಾಪ! ಅವಳೇನು ಮಾಡುವದಕ್ಕೆ ಸಾಧ್ಯ ?"

"ನಿನಗೆ ಬೇರೆ ಆಪ್ತರು ಯಾರೂ ಇಲ್ಲವೆ ?"

' ಒಬ್ಬ ಸೋದರಮಾವ ಇದ್ದಾನೆ; ಆತ ಹಚ್ಚಿಕೊಳ್ಳಲಿಲ್ಲ!"

"ನಿಮ್ಮ ಊರು ಯಾವುದು ?"

"ಕುಮಟೆಯ ಹತ್ತಿರ ಒಂದು ಹಳ್ಳಿ. ಹವ್ಯಕ ಬ್ರಾಹ್ಮಣರು ನಾವು !"

ಈ ಹೊತ್ತಿಗೆ ಒಬ್ಬ ಗೃಹಸ್ಥ ಬಂದ. ಬಂದವನು ಹಾಗೇ ಒಳಗೇ ಬಂದು ಬಿಟ್ಟ. "ಯಾ" (ಬನ್ರಿ) ಈಕೆ ಮರಾಠಿಯಲ್ಲಿ ಹೇಳಿದಳು. ಆತ ಗೋಡೆಗೆ ಆತುಕೊಂಡು ಕುಳಿತ, ನನ್ನ ಮೋರೆಯನ್ನು ನೋಡಿದ; ನಾನೂ ಆತನನ್ನು ನೋಡಿದೆ. ನಡು ಹರಯದವ. ಸ್ವಲ್ಪ ಹೆಚ್ಚು ಕಪ್ಪಾಗಿ ಇದ್ದ. ಮುಖದ ಮೇಲಿಂದ ಮತ ತಿಳಿಯಲಿಲ್ಲ.

"ಕಾಲ್ ತುಮ್ಹಿ ಆಲಾ ನಾಹೀ? " (ನಿನ್ನೆ ನೀವು ಬರಲಿಲ್ಲ?)

"ಹೋಯ್. ಕಾಮ ಹೋತ. ಸವಡ್ ಝಾಲಿ ನಾಹೀ!" (ಹೌದು ಕೆಲಸವಿತ್ತು ಬಿಡುವಾಗಲಿಲ್ಲ.)"

ಅವರ ಮಾತು—ಅಲ್ಲಿಗೇ ನಿಂತಿತು. ನಾನು ಕೇಳಿದೆ-- "ನಿಮ್ಮ ತಾಯಿ ಎಲ್ಲಿ ಹೋಗಿದ್ದಾಳೆ ?"

"ಒಬ್ಬ ಗುರುತಿನವರ ಮನೆಗೆ ಊಟಕ್ಕೆ ಹೋಗಿದ್ದಾಳೆ. "

"ನಾಳೆ ಈ ಹೊತ್ತಿಗೆ ಬಂದರೆ ಅವರು ಇರಬಹುದೋ ಮನೆಯಲ್ಲಿ? ಅವರನ್ನು ಕಂಡು ಕೆಲವು ವಿಷಯ ಮಾತನಾಡಬೇಕು! "

"ಮನೆಯಲ್ಲಿಯೇ ಇರ್ತಾಳೆ- ಬನ್ರಿ !"

ನಾನು ಎದ್ದೆ. 'ನಮಸ್ಕಾರ' ಅಂದೆ. ಅವಳೂ ಹಾಗೇ ಅಂದಳು. ನಾನು ಹೊಸ್ತಿಲ ಹೊರಗೆ ಕಾಲಿಡುವಾಗ, ಆ ನೆರೆಮನೆಯ ಹೆಂಗುಸು ತನ್ನ ಬಾಗಿಲಿನಲ್ಲಿ ನಿಂತಿದ್ದಳು. ಸೇವಂತಿಯ ಕಡೆ ನೋಡಿ ತುಟಿಯಲ್ಲಿ ನಗುತ್ತ ಹುಬ್ಬು ಹಾರಿಸಿದಳೊ ಏನೊ !

ಅವಳ ಬಗ್ಗೆ ಮತ್ತೆ ವಿಚಾರ ಪ್ರಾರಂಭವಾಯ್ತು. "ಒಬ್ಬೊಬ್ಬರಿಗೆ ಒಂದೊಂದು ಬಗೆಯ ದುಃಖ. ಇಂಥ ರೂಪವತಿಯಾದ ಹುಡುಗಿಗೆ ಗಂಡ ದೊರೆಯುವದಿಲ್ಲ. ಎಲ್ಲಕ್ಕೂ ಬಡತನವೇ ಕಾರಣವೊ ಅಥವಾ ಅವರವರ ಅದೃಷ್ಟವೇ ಕಾರಣವೊ ಯಾವುದೂ ತಿಳಿಯುವುದಿಲ್ಲ ಆ ಬಂದ ಗೃಹಸ್ಥ ಯಾರಿರಬೇಕು? ಅವನು ಬಂದ ಕೂಡಲೆ ಇವಳ ಮುಖ ಒಂದು ರೀತಿ ಆಯಿತು. ಇವಳ ತಾಯಿ ಇವಳ ಮದುವೆಯ ವಿಷಯದಲ್ಲಿ ಉದಾಸೀನಳಾಗಿರುವುದಕ್ಕೆ ಕಾರಣವೇನಿರಬಹುದು ?" ಇಂಥ ಅನೇಕ ವಿಚಾರಗಳು ನನ್ನ ತಲೆಯಲ್ಲಿ ಬಂದು ಬಂದು ಹೋಗುತ್ತಿದ್ದುವು.

ಮರು ದಿನ ಮತ್ತೆ ಹೋದೆ. ಆ ನೆರೆಮನೆಯ ಹೆಂಗುಸು ಮತ್ತು ಸೇವಂತಿಯ ತಾಯಿ ಪಡಸಾಲೆಯಲ್ಲಿ ಮಾತಾಡುತ್ತ ಕುಳಿತಿದ್ದರು. ನಾನು ಹೋದ ಕೂಡಲೆ ತಾಯಿ 'ಬನ್ರಿ' ಎಂದಳು.

"ಸೇವಂತಿ ಎಲ್ಲಿ?" ಕೇಳಿದೆ.

"ಒಳಗಿದ್ದಾಳೆ."

ನಾನು ಕೋಣೆಯಲ್ಲಿ ಹೋಗಿ ನನ್ನ ಸ್ಥಳದಲ್ಲಿ ಕುಳಿತೆ. ತಾಯಿ ಎದ್ದು ಹೋಗಿ ಸೇವಂತಿಯನ್ನು ಕಳಿಸಿದಳು.

"ನಿಮ್ಮ ತಾಯಿಯನ್ನು ಕರೆ!."

"ಬರ್ತಾಳೆ....ಚಹಕ್ಕೆ ಇಟ್ಟಿದ್ದ,ಮಾಡಿಕೊಂಡು ಬರ್ತಾಳೆ!" ಅಂದು ಜಮಖಾನೆಯ ಅಂಚಿಗೆ ಕುಳಿತಳು.

'ಇಲ್ಲಿ ನಿಮ್ಮ ಚರಿತಾರ್ಥ ಹ್ಯಾಗೆ ಜರಗತಾ ಇದೆ? ಈಗ ನರ್ಸ್-ಪರೀಕ್ಷೆ ಪಾಸಾಗಿದ್ದೀಯಾ?"

"ಇಲ್ಲ!"

"ಮತ್ತೆ – – - ಗ್ಗೆ ಹೋದೆ ಎಂದು ಹೇಳಿದೆ. ಅಲ್ಲಿ ಏನು ಮಾಡುತ್ತಾ ಇದ್ದೆ?"

' ಹಾಗೇ ಇದ್ದೆವು!"

"ಹಾಗೇ ಎಂದರೆ? ನಿಮ್ಮ ಹೊಟ್ಟೆಗೇನು ಮಾಡುತ್ತಾ ಇದ್ದೀರಿ? ನಿಮ್ಮ ಊರಲ್ಲಿ ಉತ್ಪತ್ತಿ ಏನಾದರೂ ಇದೆಯೆ?"

' ಛೆ, ಎಲ್ಲಿಯದು? ಏನೂ ಇಲ್ಲ! ಅದಿದ್ದರೆ ಈ ಅವಸ್ಥೆ ಯಾಕಾಗುತ್ತಿತ್ತು!"

ಅಷ್ಟರಲ್ಲಿ ತಾಯಿ ಚಹ ತಂದಳು. ನನ್ನ ಮುಂದೆ ಒಂದು ಕಪ್ ಅವಳ ಮುಂದೆ ಒಂದು ಕಪ್ ಇಟ್ಟು 'ತಕ್ಕೊಳ್ಳಿ' ಎಂದಳು.

"ಇಲ್ಲ ನಾನು ಚಹ ಕುಡಿಯುವದಿಲ್ಲ. ನಿನ್ನೆ ನಾನು ಬಂದಾಗ ನೀವು ಇರಲಿಲ್ಲ ನಿಮ್ಮನ್ನು ಕಾಣಬೇಕೆಂದೇ ನಾನು ಈ ಹೊತ್ತು ಬಂದೆ. ಕೂಡ್ರಿ." ನಾನು ತಾಯಿಗೆ ಹೇಳಿದೆ. ಆಕೆ ಮಗಳ ಹತ್ತಿರ ಕುಳಿತಳು.

"ಅಲ್ರೀ, ನೀವು—ಇಷ್ಟು ವರ್ಷ ಈಕೆಯ ಮದುವೆ ಮಾಡದೆ ಯಾಕೆ ಬಿಟ್ಟಿರಿ? ನಿಮ್ಮ ಗಂಡ ಯಾವಾಗ ತೀರಿಕೊಂಡರು?"

"ಅಯ್ಯೋ, ಬಹಳ ವರ್ಷ ಆಯಿತ್ರೆಪ್ಪಾ ಅದಕ್ಕ. ಬಡತನ, ಹೊಟ್ಟೆ ಸಾಗೋದು ಕಷ್ಟ. ಮದುವೆ ಆಗೋದು ಅಂದರೆ–ಹ್ಯಾಗಾಗುತ್ತೆ? ಅದಕ್ಕೂ ದುಡ್ಡು ಬೇಕು !"

"ಅದು ಸರಿ, ಆದರೂ ದುಡ್ಡಿಲ್ಲದವರ ಮದುವೆಗಳು ಕೂಡ ಆಗುವದುಂಟು. ಇಂಥ ಚೆಲುವೆಯಾದ ಹುಡುಗಿಗೆ ಒಬ್ಬ ವರನೂ ಅಲ್ಲಿ ಸಿಕ್ಕಲಿಲ್ಲವೆ ?"

" ಇದ್ರೆಪ್ಪಾ ಯಾರೂ ಮಾಡಿಕೊಳ್ಳಲಿಕ್ಕೆ ಒಪ್ಪಲಿಲ್ಲ. ಅದಕ್ಕೇ ಈ ಪ್ರಾಂತಕ್ಕೆ ಬಂದದ್ದು! "

' ನೀವು ಹೇಳುವದು ಏನೋ ಒಂದು ವಿಧವಾಗಿದೆ! ಅಲ್ಲಿಯದಿರಲಿ, ಇಲ್ಲಿ ಕೂಡ ಯಾರೂ ನಿಮ್ಮ ಮಗಳನ್ನು ಮದುವೆಯಾಗಲು ಮುಂದೆ ಬರಲಿಲ್ಲವೆ?"

"ಇಲ್ಲಿ ನಮ್ಮ ಕಡೆ ಜನ ಬಹಳ ಕಡಿಮೆ. ಇದ್ದರೂ ಅನುಮಾನಿ–ಸ್ತಾರೆ."

"ಯಾಕದು ಅನುಮಾನ ?"

"ಜನಗಳ ಮಾತು. ನಾನು ಹ್ಯಾಗೆ ಹೇಳಲಿ ?"

ಅಷ್ಟರಲ್ಲಿ ಸೇವಂತಿಗೆ ಮನೆಯಲ್ಲಿ ಅಕ್ಕಿ ತರ್ಕಾರಿ ಇಲ್ಲದ್ದು ನೆನಪಾಯಿತೇನೋ; ತಾಯಿಗೆ ಪೇಟೆಗೆ ಹೋಗಲು ಹೇಳಿದಳು. ಆಕೆ 'ಬರ್ತೇನೆ' ಎಂದು ಹೇಳಿ ಹೋಗಿಬಿಟ್ಟಳು.

"ಸೇವಂತಿ ! ನಿನ್ನ ತಾಯಿ ಹೇಳಿದ್ದು ನಿಜವೊ ? ನನಗೇನೋ ಆಕೆ ಹೇಳಿದ್ದರ ಮೇಲೆ ನಂಬಿಕೆ ಕೂಡಲಿಲ್ಲ. ನನ್ನೆದುರು ನಿಜ ಸಂಗತಿಯನ್ನು ಮರೆಮಾಜದೆ ಹೇಳು! ನನ್ನ ಕೈಲಾದರೆ ನಿನನ್ನೊಂದು ಮಾರ್ಗಕ್ಕೆ ನಾನು ಹಚ್ಚಬಹುದು! "

ಆಕೆ ಮೊದಲು ಸ್ವಲ್ಪ ಅನುಮಾನಿಸಿದಳು. ಆದರೆ ನನ್ನ ಅಂತಃಕರಣದ ಪ್ರಭಾವ ಅವಳ ಮೇಲಾಯಿತೇನೊ...ಅವಳು ಹೇಳಿದಳು. "ನಾವು ಹವ್ಯಕ ಬ್ರಾಹ್ಮಣರೆಂದು ಮೊದಲೇ ಹೇಳಿದೆ. ತಂದೆ ಇರುವಾಗಿನಿಂದ ಬಡವರು. ನಾನು ನಮ್ಮ ತಂದೆ ಸತ್ತಮೇಲೆ ಹುಟ್ಟಿದ್ದೇನೆ. ಆಗ ನಮ್ಮ ತಾಯಿ ನಮ್ಮ ಸೋದರ ಮಾವನ ಮನೆಯಲ್ಲಿರುತ್ತಿದ್ದಳು. ನಾನು

ಹುಟ್ಟಿದ ಮೇಲೆ ಆತನ ಆಶ್ರಯ ತಪ್ಪಿತು. ನನ್ನ ತಾಯಿ ನನ್ನನ್ನು ಸಾಕ-ಲಾರದೆ ಒಬ್ಬ ವೇಶ್ಯೆಗೆ ಕೊಟ್ಟುಬಿಟ್ಟಳು. ಆಕೆಯ ಸ್ಥಿತಿ ಆಗ ನೆಟ್ಟಗಿತ್ತು. ನನ್ನನ್ನು ಅವಳು ಪ್ರೀತಿಯಿಂದಲೇ ಬೆಳಸಿದಳು. ಅವಳ ಯಜಮಾನ ಮೋಟರ್ ಸರ್ವಿಸ್ಸಿನಲ್ಲಿ ದುಡ್ಡು ಕಳೆದುಕೊಂಡು ಭಿಕಾರಿ ಆದ. ನನ್ನ ಸಾಕುತಾಯಿ ನನ್ನನ್ನು ವೇಶ್ಯಾವೃತ್ತಿಗೆ ಹಚ್ಚಬೇಕೆಂದು ಹವಣಿಸಿದಳು; ನನಗದು ಸೇರಲಿಲ್ಲ. ಓಡಿ ಬಂದು ಅಬಲಾಶ್ರಮದಲ್ಲಿದ್ದೆ. ಆ ಮೇಲಿನ ಸಂಗತಿ ನಿಮಗೆ ಈ ಮೊದಲೇ ಹೇಳಿದ್ದೇನೆ."

"ಓಹೋ,—ಈ ಕಾರಣದಿಂದ ನಿನಗೆ ಎಲ್ಲಿಯೂ ವರ ಸಿಕ್ಕಲಿಲ್ಲ. ಹೋಗಲಿ, ಹೊಲಿಗೆಯ ಕೆಲಸ ಯಾಕೆ ಕಲಿಯಬಾರದು? ಒಂದು ರಾಟಿ ಮನೆಯಲ್ಲಿ ತಂದಿಟ್ಟುಕೊಂಡು ಅದರ ಮೇಲೆ ಜೀವನ ಮಾಡಬಹುದು. ಇಂಥ ದೊಡ್ಡ ಊರಲ್ಲಿ ಹೆಣ್ಣುಮಕ್ಕಳ ಹೊಲಿಗೆಯ ಕೆಲಸ ಬೇಕಾದಷ್ಟು ದೊರಕಬಹುದು!"

"ಆದರೆ ನನ್ನ ಮೈಯಲ್ಲ ಇತ್ತೀಚೆಗೆ ನೆಟ್ಟಗಿಲ್ಲ!"

"ಯಾರ ಮನೆಯಲ್ಲಾದರೂ ಅಡಿಗೆ ಅಥವಾ ಮೇಲಿನ ಕೆಲಸ ಗಳನ್ನು ಮಾಡಿಕೊಂಡು ಇರಬಹುದೋ ನೀನು? ನಿನ್ನ ಇಷ್ಟವಿದ್ದರೆ ನಾನೊಂದು ಒಳ್ಳೆ ಮನೆ ನೋಡಿ ಹಚ್ಚಿಕೊಡಬಹುದು!"

"ಈಗ ಅದ್ಯಾವುದೂ ಕೈಲಾಗುವದಿಲ್ಲ! ನನಗೆ ಬಹಳ ನಿತ್ರಾಣ"

ಇದನ್ನೆಲ್ಲ ಅವಳು ಹೇಳುತ್ತಿರುವಾಗ ನಾನು ಅವಳ ಮುಖವನ್ನು ದಿಟ್ಟಿಸಿ ನೋಡುತ್ತಿದ್ದೆ. ಆಶ್ರಮದಲ್ಲಿರುವಾಗ ಅವಳ ಮುಖ ಹ್ಯಾಗಿತ್ತು ಎಂಬುದನ್ನು ನೆನಸಿಕೊಂಡೆ ಎಷ್ಟೊಂದು ಅಂತರ! ಆಗಿನ ಕಾಂತಿಯಲ್ಲಿ ಒಂದು ಶತಾಂಶವೂ ಈಗ ಇರಲಿಲ್ಲ. ತಾರುಣ್ಯವನ್ನು ಕಾಮುಕವೃತ್ತಿ ಯಲ್ಲಿ ಮಿತಿಗೆಟ್ಟು ವೆಚ್ಚ ಮಾಡಿದವರ ಮೈ-ಮುಖ ಹ್ಯಾಗಿರಬೇಕೊ ಹಾಗೇ ಇತ್ತು ಅವಳ ಸ್ಥಿತಿ. ನೋಡಿ ಬಹು ವ್ಯಸನವಾಯಿತು. ಇವಳನ್ನು ಒಳ್ಳೇ ಸ್ಥಿತಿಯಲ್ಲಿಟ್ಟರೆ ಮೊದಲಿನ ಆ ಚೆಲುವು ಮೈದೋರಬಹುದು ಎನಿಸಿತು.

"ಈಗ ಯಾರಾದರೂ ನಿನ್ನ ಮದುವೆ ಆಗ್ತೇನೆ ಅಂತ ಬಂದರೆ?"

"ಮದುವೆ ಆಗ್ತೇನೆ ಅಂತ ಬಂದರೆ ಪರವಾ ಇಲ್ಲ; ಆದರೆ ಹೆಂಡ ತಿಯ ಹಾಗೆ ಇಟ್ಟುಕೊಳ್ತೇನೆ ಅಂದರೆ ಅದು ಬಹುಕಾಲ ನಡೆದೀತೆಂಬ ನಂಬಿಗೆ ಇಲ್ಲ!"

"ಅದು ನಿಜ. ಗಂಡುಸು ತನ್ನ ತಿಟಿತನವನ್ನು ತೀರಿಸಿಕೊಳ್ಳುವ ಹವಣಿ ಕೆಯಲ್ಲಿ ಎಷ್ಟೋ ಹೆಂಗಳೆಯರ ಜೀವನವನ್ನು ಮಣ್ಣುಗೂಡಿಸುತ್ತಿದ್ದಾನೆ! ಆದರೆ ಗಂಡುಸಿನಷ್ಟೇ ಹೆಂಗುಸೂ ಈ ಪಾಪದಲ್ಲಿ ಪಾಲುಗಾರಳಾಗಿಲ್ಲವೆ ?"

ಅಷ್ಟರಲ್ಲಿ ನೆರೆಮನೆಯ ಹೆಂಗುಸು ಬಾಗಿಲಲ್ಲಿ ನಿಂತು ಕೇಳಿದಳು: "ತಂಗೀ, ಒಂದೆರಡು ಕಡ್ಡೀ ಕೊಡಬಾರದೆ, ಕಡ್ಡಿ ತೀರ್‍ಯಾವೆ!"

ಸೇವಂತಿ ಹೋಗಿ, ಕಡ್ಡಿ ಕೊಟ್ಟಳು. ನಾನೂ ಎದ್ದು—"ಬರ್‍ತೀನೆ. ಹೊತ್ತಾಯಿತು. ನಿನ್ನ ವಿಷಯದಲ್ಲಿ ಏನಾದರೂ ಸಾಧ್ಯವಾದರೆ ನೋಡ್ತೇನೆ; ಇದು ಒಂದೇ ಸಲಕ್ಕೆ ಬಗೆ ಹರಿಯುವ ಸಮಸ್ಯೆಯಲ್ಲ."

"ಆಯಿತು— ಯಾವಾಗಾದರೂ ಬರ್‍ತಾ ಇರ್‍ರಿ."

ನಾನು ಹೊರಬೀಳುವಾಗ ಆ ನೆರೆಮನೆಯ ಹೆಂಗುಸು ತನ್ನ ಬಾಗಿ-ಲಲ್ಲಿ ನಿಂತೇ ಇದ್ದಳು. ಪುನಃ ಅವಳು ನನ್ನನ್ನು ನೋಡಿ ನಕ್ಕಳೋ ಏನೋ!

ಮುಂದೆ ಹದಿನೈದು ದಿನಗಳ ಮೇಲೆ ಟ್ರೆನಿಂಗ್ ಕಾಲೇಜಿನಲ್ಲಿ "ಈಗಿನ ನಮ್ಮ ದಾಂಪತ್ಯ ಜೀವನ, ಅದರ ತೊಡಕುಗಳು" ಎಂಬ ವಿಷಯದ ಮೇಲೆ ನನ್ನ ಉಪನ್ಯಾಸವಾಯಿತು. ನನ್ನ ಭಾಷಣದಲ್ಲಿ--ಪತಿತರಾದ ಅಬಲೆಯರ ವಿಷಯವನ್ನೆತ್ತಿ, ನಾನು ಪ್ರತ್ಯಕ್ಷ ನೋಡಿದ ಸಂಗತಿ ಎಂದು ಸೇವಂತಿಯ ಉದಾಹರಣೆಯನ್ನು ಹೇಳಿದೆ. ಅಂದಿನ ನನ್ನ ಭಾಷಣವು-- ಬಹಳ ಪರಿಣಾಮಕಾರಿಯಾಯಿತೆಂದು ಕೇಳಿದವರು ಅಭಿತೋರಿಸಿ ದರು. ನನ್ನ ಮಾತನ್ನು ಮುಗಿಸಿ ನಾನು ಮನೆಗೆ ಬರುವಾಗ, ಒಬ್ಬ ವಿದ್ಯಾರ್ಥಿಯು ನನ್ನನ್ನು ಕಂಡು ಹೇಳಿದ: "ನಾನೊಬ್ಬ ಟ್ರೇನಿಂಗ್ ಕಾಲೇಜಿನ ವಿದ್ಯಾರ್ಥಿ. ತಮ್ಮ ಭಾಷಣದಲ್ಲಿ ತಾವು ಪ್ರತ್ಯಕ್ಷ ನೋಡಿದ ಸಂಗತಿ ಎಂದು ಹೇಳಿದಿರಲ್ಲ ಆ ಹೆಣ್ಣುಮಗಳು ಯೋಗ್ಯಳಾಗಿದ್ದರೆ, ನಾನು ಮದುವೆ ಯಾಗಬೇಕೆಂದಿದ್ದೇನೆ ಆದರೆ ಮೊದಲು ಅವಳನ್ನು ನೋಡಬೇಕು!"

ನಾನು ಅನೇಕ ಪ್ರಶ್ನೆಗಳನ್ನು ಕೇಳಿ ಅವನ ಮನಸ್ಸು ಪರೀಕ್ಷಿಸಿದೆ. 'ಆಸಾಮಿ ಪರವಾ ಇಲ್ಲ' ಎಂದು ತೋರಿತು. ಆದರೆ ಅವನಿಗೆ ಒಂದೇ ಮಾತಿನ ಬಗ್ಗೆ ಖಾತ್ರಿ ಬೇಕಾಗಿತ್ತು, ಅದೆಂದರೆಃ "ಅವಳು ಕೊನೆಯವರೆಗೆ ತನ್ನ ಮೇಲೆ ಪ್ರೀತಿ ವಿಶ್ವಾಸ ಇಟ್ಟು ಇರಬಹುದೊ" ಎಂಬುದು. 'ಈ ಮಾತಿಗೆ ನಾನೇನು ಹೇಳಲಿ? ಅವಳಿಂದಲೇ ಈ ಮಾತಿನ ಬಗ್ಗೆ ಖಾತ್ರಿ

ಮಾಡಿಕೊ' ಎಂದು ಹೇಳಿ ಮರುದಿನ ಅವನನ್ನು ಅವಳ ಮನೆಗೆ ಕರೆದೊಯ್ಯಲು ಒಪ್ಪಿಕೊಂಡೆ.

ಮಾರನೆಯದಿನ ಸಾಯಂಕಾಲ ಹೋದೆವು. ಸೇವಂತಿ ಬಾಚಿಕೊಳ್ಳುತ್ತ ಕುಳಿತಿದ್ದಳು. ತಾಯಿ ಇರಲಿಲ್ಲ. ನಾವು ಬಂದದ್ದನ್ನು ನೋಡಿ ಅವಳು ಹಾಗೇ ಕೂದಲು ಕಟ್ಟಿಕೊಂಡು ಎದ್ದು ನನಗೆ ಕೂಡಲ ಹೇಳಿದಳು. ನಾವು ಗಾದೆಗೆ ಆತು ಕುಳಿತೆವು. ಅವಳು ಜಮಖಾನದ ಅಂಚಿಗೆ ಕುಳಿತಳು

'ಇವರು ನನ್ನ ಪರಿಚಯದವರು. ಸಮೀಪದ ಒಂದು ಊರಲ್ಲಿ ಶಿಕ್ಷಕರಾಗಿದ್ದಾರೆ. ಈಗ ಟ್ರೇನಿಂಗ್ ಕಾಲೇಜಿನಲ್ಲಿ ಎರಡು ವರ್ಷ ಇದ್ದು ಹೋಗಲು ಬಂದಿದ್ದಾರೆ ಇವರ ಮೊದಲನೆಯ ಹೆಂಡತಿ ತೀರಿಕೊಂಡಿದ್ದಾಳೆ. ನಿನ್ನ ವಿಷಯ ಇವರಿಗೆ ಹೇಳಿದೆ. ಕೇಳಿ ಇವರಿಗೆ ಹಳಹಳವಾಯಿತು, ನಿನ್ನನ್ನು ಪತ್ನಿಯೆಂದು ಅಂಗೀಕರಿಸಲು ಇವರು ಸಿದ್ಧರಾಗಿದ್ದಾರೆ ನೀನು ಒಪ್ಪುವೆಯಾದರೆ ನೋಡು. ಇಂಥವರನ್ನು ಮದುವೆಯಾಗುವುದೆಂದರೆ ಅದೊಂದು ಭಾಗ್ಯ; ನಿನ್ನ ಇದುವರೆಗಿನ ಜೀವನವನ್ನು ಇವರಿಗೆ ಹೇಳಿದ್ದೇನೆ. ಸಾಮಾನ್ಯವಾಗಿ ಇಂಥ ಮದುವೆಗೆ ಮನಸ್ಸು ಮಾಡುವವರು ಕಡಿಮೆ ಸ್ತುತ್ಯಕಾರ್ಯ ಎಂದು ಬಾಯಿಂದ ಹೇಳಬಹುದಾಗಲಿ ಕೃತಿಯಲ್ಲಿ ತರುವ ಸಾಹಸಕ್ಕೆ ಕೈ ಹಾಕುವವರು ತೀರ ವಿರಳ. ಮನುಷ್ಯ ಪ್ರತಿಕ್ಷಣಕ್ಕೂ ಸತ್ತು ಹುಟ್ಟುತ್ತಾನಂತೆ; ಹಾಗೆ ನೀನು ಹೊಸತಾಗಿಯೇ ಜನ್ಮ ತಾಳಿರುವೆ ಎಂದು ಭಾವಿಸು! ನಿನ್ನ ನಂಬಿಗೆ ಹುಟ್ಟುವ ಹಾಗೆ ಅವರಿಗೆ ವಚನ ಕೊಡು. ನಾವು ಎಷ್ಟೇ ಪತಿತರಾದರೂ ಪುಣ್ಯವಂತರಾಗಿ ಬಾಳುವುದಕ್ಕೆ ಹಾದಿ ಇದೆ ಹಾಗೆ ನೀವು ಪುಣ್ಯವಂತರಾಗಿ ಬಾಳಿ ಸಮಾಜಕ್ಕೆ ಒಂದು ಪಾಠ ಹಾಕಿ ಕೊಡಿರಿ!"

• ನನ್ನ ಮಾತು ಮುಗಿಯುವ ಹೊತ್ತಿಗೆ ಸೇವಂತಿಯ ಕಣ್ಣುಗಳು ಅಶ್ರುಪೂರಿತನಾದವು. ಕಿಟಕಿಯ ಕಡೆಗೆ ಕತ್ತು ತಿರುಗಿಸಿ ವಿಚಾರ ಪೂರಿತ ದೃಷ್ಟಿಯಿಂದ ನೋಡತೊಡಗಿದಳು. ಮುತ್ತುಗಳು ಒಮ್ಮೆಲೆ ದಾರ ಹರಿದು ಸರದಿಂದ ಬಳಬಳನೆ ಉದುರುವಂತೆ ಕಂಬನಿಗಳು ಜಮಖಾನೆಯ ಮೇಲೆ ಸುರಿದುವು. ಟಪಟಪ ಶಬ್ದವಾಯಿತು. ಕೆಲವು ನಿಮಿಷ ಯಾರೂ ಮಾತನಾಡಲಿಲ್ಲ. ಕಿಟಕಿಯೊಳಗಿಂದ ನಿಚ್ಚಳವಾಗಿ ಕಾಣುತಿದ್ದ ಆಕಾಶದಲ್ಲಿ ಮೋಡವೊಂದು ನಿಂತುಕೊಂಡಿತು. ಎಲ್ಲಿಂದಲೊ ಸುಂಟರಗಾಳಿ ಬಂದು ಧೂಳನ್ನು ಸುತ್ತಿಕೊಂಡು ತಿಗರಿಯಾಡಹತ್ತಿತು ಆ ಧೂಳಿಗೆ

ತನ್ನ ಧೂಳನ್ನಷ್ಟು ಸೇರಿಸಿ ಮೋಟರ್ ಒಸ್ಸೊಂದು ಅಬ್ಬರಿಸುತ್ತ ಹೊರಟು ಹೋಯಿತು. ಅದರ ಚಕ್ರದ ಕೆಳಗೆ ಸಿಕ್ಕಿತೊ ಏನೊ ನಾಯಿ, ಅದರ ಆರ್ತ ಧ್ವನಿಯೊಂದು ಕೇಳಬಂತು. ನಾನು ಕೇಳಿದೆ: "ಸೇವಂತಿ, ನಿನ್ನ ಮನೋಗತವನ್ನು ನೀನು ನಿರ್ಭಯವಾಗಿ ಹೇಳು. ನಿನ್ನ ಮನಸ್ಸಿನಲ್ಲಿ ಯಾವುದನ್ನೂ ಇಡಬೇಡ!"

ಸೇವಂತಿ ಹೇಳುವದಕ್ಕೆ ಆರಂಭಿಸಿದಳು:— "ಮಾಸ್ತರ್ರೇ, ನಾನೇನು ಹೇಳಲಿ? ಈಗ ನನ್ನ ಮನಸ್ಸು ನನ್ನ ಅಧೀನ ಉಳಿದಿಲ್ಲ. ವೇಶ್ಯಾವೃತ್ತಿಗೆ ಮನಸ್ಸೊಪ್ಪದೆ ನಾನು ಸಾಕುತಾಯಿಯ ಮನೆಯಿಂದ ಓಡಿಬಂದೆ ಎಂದು ನಿಮಗೆ ಹೇಳಿದೆ, ಅದು ನಿಜ! ಆದರೆ ನನ್ನ ಅದೃಷ್ಟದಲ್ಲಿ ಅದೇ ಬರೆದಿದೆ. ನೀವು ಯಾರೂ ಅದನ್ನು ತಪ್ಪಿಸಲಾರಿರಿ ನಾನು ಈಗ ಒಬ್ಬರ ಆಶ್ರಯದಲ್ಲಿದ್ದೇನೆ. ಆದರೆ ಅವರನ್ನೂ ನಾನು ನಂಬಿಕೊಂಡಿಲ್ಲ. ವೇಶ್ಯಾವೃತ್ತಿ ಈಗ ಪೂರಾ ನನ್ನ ಮೈಯುಂಡಿದೆ. ಹೇಸಿಗೆಯ ಸವಿಕಂಡ ನಾಯಿ ಅರಸನ ಮನೆಯಲ್ಲಿದ್ದರೂ ಅಷ್ಟೆ, ಬಡವನ ಮನೆಯಲ್ಲಿದ್ದರೂ ಅಷ್ಟೆ! ನನ್ನ ಮನಸ್ಸಿನ ಹರಿದಾಟ ಇಷ್ಟು ಬೇಗ ಹೋಗುವುದು ಸಾಧ್ಯವಿಲ್ಲ. ನನ್ನ ಬಾಳು ನೋಡಿ ನಿಮ್ಮಂಥ ಪುಣ್ಯಾತ್ಮರಿಗೆ ಕಸಿಕರವುಂಟಾಯಿತು. ಸಾಕು. ಈ ಜನ್ಮದಲ್ಲಿ ನನಗೆ ದೊರೆಯಬೇಕಾದ ಭಾಗ ಇಷ್ಟೆ! ನಾನು ಪತಿತಳು, ಪಾಪಿ! ನಿಮ್ಮ ಸ್ನೇಹಿತರಂಥ ಪುಣ್ಯಾತ್ಮರ ಹೆಂಡತಿಯಾಗಲು ನಾನು ತಕ್ಕವಳಲ್ಲ. ಅವರ ಕೈ ಹಿಡಿಯುವ ಪಾತ್ರತೆ ನನಗಿಲ್ಲ ಗರತಿಯಾಗಬೇಕೆಂಬ ನನ್ನ ಆಶೆ ಅದೊಂದು ಬರಿ ಆಶೆಯಷ್ಟೇ! ಈ ಜನ್ಮದಲ್ಲಿ ಸಫಲವಾಗುವ ಆಶೆಯಲ್ಲ! ಅದಕ್ಕೆ ಬೇರೊಂದು ಜನ್ಮವನ್ನೇ ಎತ್ತಬೇಕು ನಾನು! ನಿಮಗೆ ಕೈಮುಗಿಯುತ್ತೇನೆ. ಬೇಡ, ನನ್ನ ವಿಚಾರ ಮನಸ್ಸಿನಿಂದ ತೆಗೆದು ಹಾಕಿಬಿಡ್ರಿ! ನಿಮ್ಮ ಸ್ನೇಹಿತರು ಬೇರೆ ಮದುವೆಯಾಗಿ ಸೌಖ್ಯವಾಗಿರಲಿ. ಜನ್ಮಾಂತರಗಳು ನಿಜವೇ ಆಗಿದ್ದರೆ, ಮುಂದಿನ ಜನ್ಮಕ್ಕೆ ಅವರ ಹೆಂಡತಿಯಾಗಿ ಅವರ ಸೇವೆ ಮಾಡುವ ಭಾಗ್ಯ ನನಗೆ ದೊರೆಯಬಹುದು! ಯಾಕೆ ದೊರೆಯಬಾರದು?"

ಮತ್ತೆ ಅವಳ ಗಲ್ಲದ ಮೇಲಿಂದ ಕಂಬನಿಗಳು ಟಪಟಪನೆ ಉದುರಿದವು.

ಮೋಡ ಬಯಲಾಗಿ ಆ ಸ್ಥಳದಲ್ಲಿ ಒಂದು ತಾರೆ ಮಿನುಗಹತ್ತಿತ್ತು. "ತಂಗೀ, ದೀಪ ಹಚ್ಚಬಾರದೆ? ಕತ್ತಲಾತು" ನೆರಮನೆಯ ಕಸಬೆರವಳೂ

ಕೂಗಿ ಹೇಳಿದಳು. ಸೇವಂತಿ ಎದ್ದು ದೀಪ ಅಂಟಿಸಿದಳು. ಬಾಗಿಲಲ್ಲಿ ಸೈಕಲ್ ನಿಂತ ಸಪ್ಪಳವಾಯಿತು. 'ಒಳಗೆ ಒರಬಹುದೊ' ದನಿ ಕೇಳಿಸಿತು. ನಾವು ಎದ್ದು ಹೊಸ್ತಿಲದ ಹೊರಬಿದ್ದೆವು, ಒಬ್ಬ ಪೋಲೀಸ ವೇಷದವ ಒಳನುಗ್ಗಿದ.

ಒಂದು ನಿಟ್ಟುಸಿರು ಬಿಟ್ಟು, ವಿದ್ಯಾರ್ಥಿ ಅಂದ— "ಮಾಸ್ತರ್ರೆ, ನದಿಯ ನೀರು ಕುಡಿಯುವವರು ಮೊದಲೇ ಕುಡೀತಾರೆ, ಅದು ಸಮುದ್ರ ಸೇರಿದ ಮೇಲೆ ಯಾರ ಕೈಗೂ ಹತ್ತುವದಿಲ್ಲ, ನಡೆಯಿರಿ ಬಂದ ಹಾದಿಯಿಂದ ಮನೆಗೆ ಹೋಗೋಣ."

ವಿದ್ಯಾರ್ಥಿಯೇನೊ ಹೀಗೆಂದ; ಆದರೆ ನನ್ನ ಆತ್ಮಕ್ಕೆ ಮಾತ್ರ ಸಮಾಧಾನ ಎನಿಸಲಿಲ್ಲ

---

# ಸಾಹಿತಿಗೊಂದು ಸಮಾಧಾನ.

ಮ್ಯಾಟ್ರಿಕ್ ಮುಗಿದ ಮೇಲೆ ನಾನು ಕಾಲೇಜ್ ಹಿಡಿದೆ; ನನ್ನ ಜೊತೆಗಾರ ಹೇರಂಬ, ನಾಟಕ ಕಂಪನಿಯಲ್ಲಿ ಸೇರಿದ. ನಮ್ಮಿಬ್ಬರ ಹೈಸ್ಕೂಲ್ ಶಿಕ್ಷಣ ಒಂದೇ ಕಾಲಕ್ಕೆ ಪ್ರಾರಂಭವಾಗಿತ್ತು. ಅದರಂತೆಯೆ ಕೊನೆಗಂಡಿತ್ತು. ಎರಡುದೇಹ ಒಂದು ಜೀವವೆನಿಸುವ ಹಾಗಿರುವ ನಮ್ಮ ಗೆಳೆತನ, ಹಲವರಿಗೆ ಕೌತುಕದ ವಿಷಯವಾಗಿತ್ತು. ಒಬ್ಬರನ್ನೊಬ್ಬರು ಅನ್ಯೋನ್ಯವಾಗಿ, ಅಸಾಧಾರಣವಾಗಿ ಪ್ರೀತಿಸಿದ ನಾವು, ಮುಂದೆ ನಮ್ಮ ಗೆಳೆತನವನ್ನು, ಕಂಡರೆ ಮಾತಾಡಿಸುವಷ್ಟು ಉಳಿಸಿಕೊಂಡೆವು. **ಬಿ. ಎ.** ಆಗಿ ನಾನು ಪುನಃ ಶಾಲೆಯನ್ನು ಸೇರಿದೆ; ಹೇರಂಬ ಆ ಹೊತ್ತಿಗೆ ಸಿನೆಮಾ

ರಂಗದಲ್ಲಿ ಕಾಲು ಹಾಕಿದ್ದ. ಶಾಲೆಯಲ್ಲಿರುವಾಗ ನಾವಿಬ್ಬರೂ ಒಂದೊಂದು ಆಶೆಯನ್ನು ಗುರಿಯಾಗಿಟ್ಟುಕೊಂಡು, ಅದರ ಸಾಧನೆಗಾಗಿ ಹವಣಿಸುತ್ತಿದ್ದೆವು. ಸಾಹಿತಿಯಾಗಬೇಕೆಂದು ನಾನು, ಕಲಾವಿದನಾಗಬೇಕೆಂದು ಹೇರಂಬ. ಒಬ್ಬನದು ಸಾಹಿತ್ಯ, ಇನ್ನೊಬ್ಬನದು ನಾಟ್ಯ! ಆಗ ಕಿರಿಯರ ಬಳಗದ 'ಕಿರಣ' ಎಂಬ ಕೈಬರೆಹದ ವಾರ್ಷಿಕಕ್ಕೆನಾನೇ ಮೂರು ವರ್ಷ ಸಂಪಾದಕನಾಗಿದ್ದೆ. ಕಾಲೇಜಿನಲ್ಲಿರುವಾಗಲೂ ನನ್ನ ಸಾಹಿತ್ಯಪ್ರಯತ್ನ ಅವಿರತವಾಗಿ, ಅವ್ಯಾಹತವಾಗಿ ನಡೆದೇ ಇತ್ತು 'ಮಿಸೆಲೆನಿ'ಯಲ್ಲಿ ಬೆಳಕು ಕಂಡ ಕಪಬರಿಗೆಯ ಮೇಲಿನ ಹರಟೆ, ಕೋಗಿಲೆಯ ಮೇಲಿನ ಕವನ, 'ಕನ್ಯಾರ್ಥಿ' ಎಂಬ ಕಥೆ, 'ಕವಿಹೃದಯ' ಎಂಬ ಪ್ರಬಂಧ ನನ್ನ ಹೆಸರನ್ನು ಆಗ ಬೆಳಗಿಸಿದ್ದುವು. ಸಾಹಿತ್ಯಪ್ರಯತ್ನದಲ್ಲಿ ನಾನು ಸಂಪೂರ್ಣ ಸ್ವಾವಲಂಬಿಯಾಗಿದ್ದೆ ಎಂದು ಹೇಳಲು ನನಗೆ ಅಭಿಮಾನವೆನಿಸುತ್ತದೆ. ನಾನು ಯಾರನ್ನೂ ಗುರು ಎಂದು ಇಟ್ಟುಕೊಂಡಿರಲಿಲ್ಲ; ಆದರೂ ನನ್ನ ಹರಟೆಯ ಜಾತಿ ಜಾಗೀರದಾರರದು, ಕಥೆಯ ರೀತಿ ಮಾಸ್ತಿಯವರದು, ಕವನದಲ್ಲಿಯ ಬೆಡಗು ಬೇಂದ್ರೆಯವರದು, ಪ್ರಬಂಧದ ಪ್ರಕಾಂಡ ತಾಂಡವ ಗುಂಡಪ್ಪನವರದು— ಎಂದು ಹಲವರು ನನ್ನ ಬರೆಹಕ್ಕೆ ಹೆಸರಿಟ್ಟು ಹೀಯಾಳಿಸಿ ಮಾತನಾಡಿದ್ದಾರೆ. ಈ ಸಾಹಿತ್ಯದಲ್ಲಿಯ ದೊಡ್ಡಾಚಾರ್ಯರಲ್ಲಿ ಒಂದು ದುರ್ಗುಣವನ್ನು ನಾವು ಕಾಣಬಹುದು: ಅವರಂತೆ ಬರೆದರೆ ಅನುಕರಣವೆನ್ನುತ್ತಾರೆ; ಬೇರೆ ಬರೆದರೆ ಕಸುಕು ಎಂದು ಮೂಗು ಮುರಿಯುತ್ತಾರೆ. ನಾನು ಮಾತ್ರ ನನ್ನದೇ ಆದ ಒಂದು ಬರೆವಣಿಗೆಯ ವೈಶಿಷ್ಟ್ಯವನ್ನು ಬೆಳೆಯಿಸಿಕೊಂಡು ಬಂದಿದ್ದೆ. ಆದರೆ ಅದಕ್ಕೆ ತಕ್ಕ ಉತ್ತೇಜನವು ಹಿರಿಯರೆಂಬವರಿಂದ ದೊರೆಯಲಿಲ್ಲ ಒಬ್ಬ ಕವಿವರ್ಯರು ನನ್ನ ಕವನದಲ್ಲಿಯ ಕೆಲವು ಸಾಲುಗಳನ್ನು ತಮ್ಮ ಕವನದಿಂದಲೇ ಎತ್ತಿಹಾಕಿರುವೆನೆಂದು ಟೀಕಿಸಿದರು. ವಿಮರ್ಶಕರೊಬ್ಬರು, ನನ್ನ ಸ್ವತಂತ್ರ ಪ್ರಬಂಧಕ್ಕೆ 'ಇಂಗ್ಲೀಷಿನಿಂದ ಕದ್ದುದ್ದು' ಎಂದು ಹೆಸರಿಟ್ಟರು. ನನ್ನ ಒಂದು ಕಥೆಗೂ 'ಬಂಗಾಲಿಯ ಕನ್ನಡೀಕರಣ' ಎಂದು ಹೇಳಿದವರೂ ಇದ್ದಾರೆ. ಈ ಎಲ್ಲ ಟೀಕೆ ನನ್ನ ಪರೋಕ್ಷದಲ್ಲಿಯೆ ನಡೆಯುತ್ತಿದ್ದರೂ, ನನ್ನ ಉತ್ಸಾಹವನ್ನು ಮಾತ್ರ ಅದು ಬಹುಮಟ್ಟಿಗೆ ಕುಗ್ಗಿಸಿತು. ಮಾಸಪತ್ರಿಕೆಯ ಸಂಪಾದಕ

ರಾದರೂ, ನನ್ನ ಲೇಖನ ಪ್ರಯತ್ನಕ್ಕೆ ಪ್ರಕಟನೆಯ ರೂಪದಿಂದ ಉತ್ತೇಜನ ಕೊಟ್ಟಿದ್ದರೆ ಎಷ್ಟೋ ಒಳಿತಾಗುತ್ತಿತ್ತು. ಆದರೆ ಅವರೂ ಒಂದೊಂದು ದೊಡ್ಡಾಚಾರ್ಯರ ಗುಂಪಿಗೆ ಸೇರಿದವರೆ, ಅಥವಾ ಸ್ವಯಂ ದೊಡ್ಡಾಚಾರ್ಯರೆಂದು ತಿಳಿದುಕೊಂಡವರೆ!

ಶಿಕ್ಷಕನಾದ ಮೇಲೆ, ನನ್ನ ಲೇಖನ ವ್ಯವಸಾಯ ಬರುಬರುತ್ತ ಕಡಿಮೆಯಾಗುತ್ತ ನಡೆಯಿತು. ಪ್ರಬಂಧಕ್ಕೆ ವಿಚಾರ ಸಾಲದು, ಕವನಕ್ಕೆ ಸ್ಫೂರ್ತಿಯ ಅಭಾವ, ಹರಟೆಗೆ ಬಹುಶ್ರುತತೆಯ ಕೊರತೆ, ಹೀಗೆ ಏನೇನೋ ಆಗುತ್ತಾ ಇತ್ತು. ಇನ್ನು ಉಳಿಯಿತು ಕತೆಗಾರಿಕೆ. ಅದಕ್ಕ ಕಲ್ಪಕತೆ ಮತ್ತು ಪ್ರಪಂಚಜ್ಞಾನ ಸಾಕಷ್ಟು ಬೇಕು. ಪ್ರಪಂಚ ಹೂಡಿದ ಮೇಲೆ ಪ್ರಪಂಚಜ್ಞಾನ ಬಂದೇ ಬರುತ್ತದೆ. ಮನಸ್ಸಿಗೂ ಕಲ್ಪನೆಯನ್ನಂತೂ ಕಲಿಸುವುದೇ ಬೇಡ. ಈ ಒಂದು ವಿಶ್ವಾಸವೇ ನನ್ನಲ್ಲಿಯ ಕತೆಗಾರಿಕೆಯನ್ನು ಇನ್ನೂ ಉಳಿಸಿದೆ ಎಂದು ಹೇಳಬೇಕು. ಈಗಲೂ ಈ ವಿಶಿಷ್ಟ ಕ್ಷೇತ್ರದಲ್ಲಿ ನನ್ನ ಲೇಖನಕಾರ್ಯ ನಡೆದೇ ಇದೆ. ಕತೆಗೆ ನಾನು ಆರಿಸಿಕೊಳ್ಳುವ ವಿಷಯಗಳು ಕೂಡ ಎಲ್ಲರ ಅನುಭವಕ್ಕೆ ಬರುವಂತಹವು. ಜೋಚ್ಚಿಲ ಬಸಿರು, ತೊಟ್ಟಿಲ ಸಂಭ್ರಮ, ಮಗುವಿನ ಮುದ್ದು, ಮುದಿಕೆಯ ಮುದ್ದು—ಇಂತಹ ಹಲವು ಸಂದರ್ಭಗಳ ಮೇಲೆ ಕತೆಗಳನ್ನು ಬರೆದಿದ್ದೇನೆ. ಯಾವುದಾದರೊಂದು ಸಂದರ್ಭ ನನ್ನ ಮನಸ್ಸನ್ನು ಹೆಚ್ಚಾಗಿ ಹಿಡಿದರೆ, ಕತೆಗೆ ಅದು ಒಳ್ಳೆಯ ವಸ್ತು ಎಂದು ನನ್ನ ಅಭಿಪ್ರಾಯ. ಮೊನ್ನೆ ಇಂತಹದೊಂದು ಸಂದರ್ಭವೊದಗಿತು. ಶಾಲೆಯಿಂದ ಆ ದಿನ ಸ್ವಲ್ಪ ತಡವಾಗಿಯೆ ಬಂದೆ. ಆಟವಾಡಿ ದಣಿದದ್ದರಿಂದ ಹೊಟ್ಟೆಯಲ್ಲಿ ಬಕಾಸುರ ಹೊಕ್ಕ ಹಾಗಿತ್ತು. ಮನೆಗೆ ಹೋದೊಡನೆಯೆ ಹೆಂಡತಿ ರುಚಿ-ರುಚಿ ಅಡಿಗೆ ಮಾಡಿ ಬಡಿಸುವಳೆಂದು ಎಣಿಕೆ ಹಾಕಿದ್ದೆ. ಬಂದು ನೋಡುತ್ತೇನೆ— ಇನ್ನೂ ಪಲ್ಲೆಗೆ ಒಗ್ಗರಣೆ ನಡೆದಿದೆ! ಅದಾದರೂ ಬೇರೆ ಪಲ್ಲೆ ಎನ್ನಬೇಕೆ? ಹಾಳು ಕುಂಬಳಕಾಯಿ ನನ್ನ ದುರದೃಷ್ಟಕ್ಕೆ! ಕುಂಬಳಕಾಯಿಗೂ ನನಗೂ ಏಳು ಜನ್ಮದ ವೈರತ್ವ! ಸಿಟ್ಟು ಬ್ರಹ್ಮರಂಧ್ರಕ್ಕೆ ಮುಟ್ಟಿತು. ಕುಂಬಳಕಾಯ ಹೋಳುಗಳನ್ನು ಅವಳ ತಲೆಯ ಮೇಲೆ ಸುರಿದು, ಐದೂ ಬೆರಳುಗಳನ್ನು ಅವಳ ಗಲ್ಲದ ಮೇಲೆ ಮೂಡಿಸಿದೆ. ಆ ಏಟಿನ ಸಪ್ಪುಳಕ್ಕೆ ಮಲಗಿದ ಕೂಸು ಮೆಟ್ಟಿಬಿದ್ದಿತು. ಸಣ್ಣ ಕತೆಗೆ ಇದೊಂದು ಯೋಗ್ಯವಾದ ವಸ್ತು ಎಂದೆನಿಸಿತು

ಹಾಗೆಯೇ ಬೆಳತನಕ ಕುಳಿತು ಒಂದು ಕಥೆಯನ್ನು ಹೆಣೆದೆ. ನಾನು ಇದು ವರೆಗೆ ಬರೆದ ಎಲ್ಲ ಕತೆಗಳಲ್ಲಿ ಇದು ಒಳ್ಳೆ ಪರಿಣಾಮಕಾರಿಯಾದ ಕಥೆ— ಎಂದು ನನ್ನ ಮತ. ಹಲವರಿಗೆ ನಾನು ಈ ಕಥೆಯನ್ನು ಓದಿ ತೋರಿಸಿದ್ದೇನೆ. ಕೆಲವರು ಬಡಿಸಿಕೊಂಡ ಹೆಣ್ಣುಮಗಳಿಗಾಗಿ ಕನಿಕರ ಪಟ್ಟರು. ಕೆಲವರು ಗಂಡನ ಮುಂಗೋಪಿತನವನ್ನು ಹಳಿದು ಮಾತನಾಡಿದರು. ಬೇರೆ ಕೆಲವರು ಕಥೆಗೆ ಇದು ಯೋಗ್ಯವಾದ ವಿಷಯವೇ ಅಲ್ಲವೆಂದು ಟೀಕಿಸಿದರು. ಹೀಗೆ ಯಾರಿಂದಲೂ ನನ್ನ ಬರೆವಣಿಗೆಯ ಬಗ್ಗೆ ಸರಿಯಾದ ಅಭಿಪ್ರಾಯವಾಗಲಿ, ಮನ್ನಣೆಯಾಗಲಿ ದೊರೆಯಲಿಲ್ಲ. ಆದರೆ ಈ ಕಥೆಯನ್ನೋದಿಕೊಂಡರೆ, ನನ್ನದು ನನಗೇ ತುಂಬ ಸಂತೋಷವಾಗುತ್ತದೆ. ಎಷ್ಟೋ ಸಲ ಅದರ ಕೊನೆಯನ್ನೋದಿ ಕಣ್ಣೀರಿಕ್ಕಿದ್ದೇನೆ. ಇತ್ತೀಚೆಗೆ ಸಹೃದಯರಾದ, ರಸಿಕರಾದ ಓದುಗರ ಸಂಖ್ಯೆ ಕಡಿಮೆಯಾಗುತ್ತ ನಡೆದಿದೆ— ಎಂದು ನನ್ನ ಗ್ರಹಿಕೆ. ಪ್ರಗತಿಯ ಮುದ್ರೆಯನ್ನೊತ್ತಿಕೊಂಡು ಬರುವ ಅಶ್ಲೀಲದ ಕೊಳೆಗೆ ಮಾತ್ರ ಇಂದು ತುಂಬ ಬೇಡಿಕೆ ಇದೆ!

ಹೀಗೇ—ಕರ್ಮಧರ್ಮ ಸಂಯೋಗ! ಆ ದಿನ ಪೇಟೆಯಲ್ಲಿ ಆಕಸ್ಮಿಕವಾಗಿ ಹೇರಂಬ ಕಣ್ಣಿಗೆ ಬಿದ್ದ. ಅವನನ್ನು ಕಾಣುವೆನೆಂದು ನನ್ನ ಕನಸು ಮನಸಿನಲ್ಲಿಯೂ ಇರಲಿಲ್ಲ. ಈಗ ಸುಮಾರು ಆರು ವರ್ಷಗಳಲ್ಲಿ ಅವನ ಮೋರೆಯನ್ನು ನಾನು ಕಂಡಿರಲಿಲ್ಲ. ಬಾಲ್ಯ ಸ್ನೇಹಿತ, ಮೇಲಾಗಿ ಸಿನೇಮಾ ನಟ; ಆರು ವರ್ಷಗಳ ಮೇಲೆ ಇದೇ ಈಗ ಭೆಟ್ಟಿಯಾಗಿದ್ದಾನೆ. ನನ್ನ ಪ್ರೀತಿಗೆ ಕೂಡಲೆ ಉಕ್ಕು ಬಂದಿತು ಅವನನ್ನು ಗಾಢವಾಗಿ ಅಪ್ಪಿಕೊಂಡೆ. ಆಗ ಕಥೆಯನ್ನು ಅವನಿಗೆ ಓದಿ ತೋರಿಸಬೇಕೆಂಬ ವಿಚಾರ ಥಟ್ಟನೆ ತಲೆದೋರಿತು! ಆದರೆ ಒಮ್ಮೆಲೆ ಅದಕ್ಕಾಗಿ ಬಾ ಎಂದು ಕರೆಯುವುದು ಗೌಣಪಕ್ಷ—ಹಾಗೆಯೆ ಮನೆಗೆ ಕರೆದೊಯ್ದು ಆ ಮೇಲೆ ಈ ಮಾತನ್ನು ತೆಗೆದರೆ ಒಳಿತು ಎಂದುಕೊಂಡು, ಮನೆಗೆ ಬರಲು ಆಗ್ರಹ ಮಾಡಿದೆ. ಅವನೂ ಒಪ್ಪಿಕೊಂಡ. ಹಾದಿಯಲ್ಲಿ ಸಿನೇಮಾ ಪ್ರಪಂಚದ ಮಾತುಗಳೇ ನಡೆದುವು. ಅದಂತೂ ಎಷ್ಟು ಮಾತನಾಡಿದರೂ ತೀರದ ವಿಷಯ!

ಮನೆಗೆ ಬಂದೊಡನೆಯೆ ಚಹಕ್ಕೆ ಆರ್ಡರ್ ಕೊಟ್ಟೆ. ಇಬ್ಬರೂ ಮತ್ತೆ ಸುಖಸಂಕಥಾವಿನೋದದಲ್ಲಿ ಮಗ್ನರಾದೆವು. ನನ್ನಂತೆ ಹೇರಂಬನೂ

ಹರಟೆಗೆ ಬಲು ಜೋರು. ಕುಳಿತು ಅರ್ಧ ಗಂಟೆಯಾದರೂ ಮಾತನ್ನು ಪ್ರಾರಂಭಿಸಲು ನನಗೆಲ್ಲೆಲ್ಲಿಯೂ ಅನುವು ದೊರೆಯಲೊಲ್ಲದು. ಅವನು ಏಕ ಪ್ರಕಾರವಾಗಿ ಉಸಿರು ಬಿಡದೆ ಮಾತನಾಡುತ್ತಿದ್ದ. ಒಂದು ಅರ್ಧನಿಮಿಷ ಅವನು ಮೌನವಾಗಿದ್ದರೆ ಪ್ರಾರಂಭಿಸಬೇಕೆಂದು ನಾನು; ಆದರೆ ಆ ಮಹಾ ರಾಯನೇನು ಮಾತು ನಿಲ್ಲಿಸಲಿಲ್ಲ! ಅಷ್ಟರಲ್ಲಿ ಚಹ ಸಿದ್ಧವಾದ ಸೂಚನೆ ಬಂತು. ಚಹದ ಕಪ್ಪನ್ನು-ಅವನ ಕೈಯಲ್ಲಿಡುವಾಗ ನುಡಿದೆ: "ನನ್ನ ವಿಷಯ ನಾನು ಹೇಳಲಿಲ್ಲ; ಇತ್ತೀಚೆಗೆ ನಾನೂ ಕಥೆಗಳನ್ನು ಬರೆಯುತ್ತೇನೆ. ಎರಡು ಮೂರು ಕಥೆಗಳಂತೂ ಚಿತ್ರಪಟಕ್ಕೆ ತುಂಬ ಯೋಗ್ಯವಾಗಿವೆ. ಅದರಲ್ಲಿ ಮೊನ್ನೆ ನಾನು ಬರೆದ ಕಥೆ—ಅದು ಒಂದು ವೇಳೆ ಚಿತ್ರಪಟವಾದರೆ ನೋಡಿದವರೆಲ್ಲ ಅತ್ತು ಬಿಡಬಹುದು--ಅಷ್ಟು ಪರಿಣಾಮಕಾರಿಯಾಗಿದೆ... ಆ ಕಥೆ"

"ಕಥೆಯ ವಿಷಯ ?"

"ವಿಷಯ ತೀರ ಸಾಮಾನ್ಯವಾದದ್ದು; ಎಲ್ಲರ ಮನೆಯಲ್ಲಿಯೂ ಒಮ್ಮೆಲ್ಲೊಮ್ಮೆ ನಡೆಯುವಂಥಾದ್ದು !"

'ಅಂದರೆ ಹುಟ್ಟೋ ಸಾವೋ ?"

"ಅವೆರಡೂ ಅಲ್ಲ, ಓದಿ ತೋರಿಸಲೆ ? ಬಹಳ ಹೊತ್ತು ಬೇಕಾಗುವುದಿಲ್ಲ. ಅರ್ಧ ಗಂಟೆ ಸಾಕು. ಇತ್ತೀಚೆಗೆ ನಾನು ಬರೆದ ಕಥೆಗಳನ್ನು ನೀನು ಓದಿಲ್ಲ !"

ಅವನಿಂದ ಸಮ್ಮತಿಯನ್ನು ಅಪೇಕ್ಷಿಸದೆ, ನಾನು ಒಳಗೆ ಹೋಗಿ ನನ್ನ ಕಥೆಯ ನೋಟ್ ಬುಕ್ ಹೊರಗೆ ತಂದೆ.

"ಮೊದಲು ಮೊನ್ನೆ ಬರೆದ ಕಥೆಯನ್ನೇ ಓದುತ್ತೇನೆ. ಆ ಮೇಲೆ ನಿನಗೆ ಕೇಳಬೇಕೆನಿಸಿದರೆ ಬೇರೆ ಒಂದೆರಡು ಕಥೆಗಳನ್ನು ಓದೋಣ !"

"ಬಹಳ ಒಳ್ಳೇಯದು ಎಂದು ಹೇಳಿದೆಯಲ್ಲ; ಆ ಒಂದನ್ನಂತೂ ಓದು ! ಆ ಒಂದು ಕಥೆಗೆನೇ ನಾನು ಹೈರಾಣ ಆದರೆ, ಮುಂದೆ ಓದುವ ಕಾರಣವಿಲ್ಲ!"

ಅವನ ಮಾತಿನ ಕಡೆಗೆ ಲಕ್ಷ್ಯಕೊಡದೆ ನಾನೇನೊ ಪ್ರಾರಂಭ ಮಾಡಿದೆ.

ವರ್ಷಾಕಾಲದ ವರ್ಣನೆಯಿಂದ ಕಥೆಗೆ ಮೊದಲಾಗುತ್ತದೆ. ವರ್ಣನೆಯಲ್ಲಿ ಪುಟ್ಟಪ್ಪಗಿಟ್ಟಪ್ಪನಿಗಿಂತ ಪ್ರೌಢ ಸಂಸ್ಕೃತ ಶಬ್ದಗಳನ್ನು ಹೆಚ್ಚಾಗಿ ಉಪಯೋಗಿಸಿದ್ದೇನೆ; ಆದರೆ ಹೇರಂಬನಿಗೆ ಅದು ಹಿಡಿಯಲಿಲ್ಲವೆಂದು ಕಾಣುತ್ತದೆ. ಅವನು ಕುಳಿತಲ್ಲಿಯೆ ಚಳುವಳಿ ನಡೆಯಿಸಿದ್ದ. ಎರಡು ಪುಟ ಈ ವರ್ಣನೆಯಾದ ಮೇಲೆ, ಅಡಿಗೆ ಮನೆಯ ವರ್ಣನೆ ಒಂದು ಪುಟ ಓದಿ ಮುಗಿಸಿದೆ. ಆ ಹೊತ್ತಿಗೆ ಹೇರಂಬ ಒಂದು ಸಿಗರೇಟ್ ಮುಗಿಸಿ ಇನ್ನೊಂದನ್ನು ಹೊತ್ತಿಸುತ್ತ, ಶೂನ್ಯ ಮನಸ್ಕನಾಗಿ ಸ್ವಲ್ಪ ಬೇಜಾರುಗೊಂಡ ದನಿಯಲ್ಲಿ ನುಡಿದ: 'ಈ ವರ್ಣನಾ ಭಾಗಗಳು ಮುಗಿದುವೊ, ಇನ್ನೂ ಇವೆಯೋ ? ಜಪ್ತಿಗೆ ಬಂದವರ ಪಂಚನಾಮೆಯ ಪಟ್ಟಿಯ ಹಾಗೆ. ಸಣ್ಣ ಕಥೆಯಲ್ಲಿ ಈ ಉದ್ದುದ್ದ ವರ್ಣನೆಗಳ ಅಗತ್ಯವೇನು ? ಅವನ್ನು ಬಿಟ್ಟು ಮುಖ್ಯ ಕಥಾಭಾಗವನ್ನಷ್ಟೇ ಓದು ನೋಡೋಣ !''

''ಇಲ್ಲ ಈಗ ಅದೇ ಭಾಗವೇ ಬರುತ್ತದೆ; ಸ್ವಲ್ಪ ಮನಸ್ಸುಗೊಟ್ಟು ಕೇಳು !'' ಎಂದು ನಾನು ಒಂದು ಸಲ ಕೆಮ್ಮಿ, ದನಿಯನ್ನು ಸಡಿಲಿಸಿ, ಹಾವ-ಭಾವದೊಡನೆ ಓದತೊಡಗಿದೆ. ಆ ಭಾಗ ಹೀಗಿತ್ತು:

'ನನಗೆ ಅದೇನೊ ಹುಚ್ಚು ಸಿಟ್ಟು ಒಂದು ಬಿಟ್ಟಿತ್ತು. ಮೂಲೆಯಲ್ಲಿ ಬಟ್ಟೆ ಒಣಹಾಕುವ ಕೋಲಿತ್ತು. ಅದನ್ನು ತಕ್ಕೊಂಡೆ, ಚೆನ್ನಾಗಿ ಎರಡೇಟು ಸೆಳೆದೆ. ಬೆನ್ನ ಮೇಲೆ ಬಿದ್ದವು.'

ಇಷ್ಟು ಓದುವುದೇ ತಡ; ಹೇರಂಬನ ಕಣ್ಣುಗಳಲ್ಲಿ ಅಶ್ರುಗಳು ತುಂಬತೊಡಗಿದುವು. ಮೂಗು ಕೆಂಪಾಗಹತ್ತಿತು. ಗಲ್ಲಗಳು ಉಬ್ಬತೊಡಗಿದುವು. ನನ್ನ ಉತ್ಸಾಹ ಮುಮ್ಮಡಿಸಿತು. ದನಿಯನ್ನು ಇನ್ನಿಷ್ಟು ಹದಗೊಳಿಸಿ, ಮುಖದಲ್ಲಿ ಸರಿಯಾದ ಭಾವವನ್ನು ಮೂಡಿಸಿ, ಓದನ್ನು ಮುಂದುವರಿಸಿದೆ. ಆ ಭಾಗ ಹೀಗಿತ್ತು:

'ಮತ್ತೆ ಎರಡೇಟು ಬಿಗಿದೆ. ಒಂದು ರಟ್ಟೆಯ ಮೇಲೆ, ಇನ್ನೊಂದು ಕಾಲಿನ ಮೇಲೆ ಬಿದ್ದುವು. ನೆಲಕ್ಕೆ ಬಿದ್ದು ಅಳತೊಡಗಿದಳು.'

ನಾನು ನಡು-ನಡುವೆ ಹೇರಂಬನ ಮುಖದ ಕಡೆಗೆ ನೋಡುತ್ತಲೇ ಇದ್ದೆ. ಅವನು ಕರವಸ್ತ್ರ ತೆಗೆದು ಒಮ್ಮೆ ಕಣ್ಣು, ಒಮ್ಮೆ ಮೂಗು, ಹೀಗೆ ಎಡೆಬಿಡದೆ ಒರಸಿಕೊಳ್ಳುತ್ತಿದ್ದ. ಕಣ್ಣ ಧಾರೆಗಿಂತ ಮೂಗಿನ ಧಾರೆಯೇ ಹೆಚ್ಚಾಗಿತ್ತು. ನನ್ನ ಕಥೆ ಮಾತ್ರ ವರ್ಷಾಕಾಲದ ಪ್ರವಾಹದಂತೆ ಸಂತತ

ವಾಗಿ ಮುಂದೆ ಸಾಗಿತ್ತು. ಹೇರಂಬ ಮೋರೆ ತಿರುಹಿ ಒಂದು ಮುಗ್ಧನಾಗಿ ಕುಳಿತ. ಅವನ ಕಣ್ಣೀರ ಧಾರೆ ನಡೆದೇ ಇತ್ತು. ಆಗ ನನಗೊಂದು ಸಂಶಯ ಬಾಧಿಸತೊಡಗಿತು: ಹೇರಂಬನ ಈ ವಿಲಾಪ ನಿಜವಿರಬಹುದೆ?-ಎಂದು. ಹೇಳಿಕೇಳಿ ಅವನು ಸಿನೆಮಾ ನಟ. ಡೈರೆಕ್ಟರು ಹೇಳಿದಾಗ, ಹೇಳಿದಷ್ಟು ಸಲ ಇವರು ಅಳುತ್ತಾರೆ. ಈ ನಟರಿಗೆ ಅಳುವುದು ನಗುವುದು ಎಂದರೆ ನಾವು ಸಾಮಾನ್ಯವಾಗಿ ಉಸಿರಾಡಿಸಿದ ಹಾಗೆ. ಹೇರಂಬ ಹೀಗೇ ನಾದರೂ ನನ್ನ ಮುಂದೆ ನಟಿಸುತ್ತಿರಬಹುದೆ? ಕಥೆಯಲ್ಲಿಯ ಹೆಂಡತಿ ಹಾಗಿರಲಿ, ಪ್ರತ್ಯಕ್ಷ ನನ್ನ ಹೆಂಡತಿಯು ಕೂಡ ಬಡಿಸಿಕೊಂಡಾಗ ಇಷ್ಟೊಂದು ಅತ್ತಿರಲಿಲ್ಲ. ಇದೇನು ನಟನೆಯೆ? ಅಥವಾ ನನ್ನ ಬರವಣಿಗೆಯೆ ಇವನ ಮೇಲೆ ಇಷ್ಟೊಂದು ಪರಿಣಾಮವನ್ನುಂಟು ಮಾಡಿದ್ದೀತೆ ?... ಈ ವಿಚಾರ ಗಳ ಹೊಯ್ದಾಟದಲ್ಲಿಯೇ ನನ್ನ ಓದು ಮುಂದೆ ಮುಂದೆ ಸಾಗಿದ್ದಿತು. ಹೇರಂಬ ಅದೇ ಭಂಗಿಯಲ್ಲಿಯೇ ಕಣ್ಣೊರಸುತ್ತ ಕುಳಿತಿದ್ದ. ಕೊನೆಗೆ ಕಥೆಯ ಅಂತ್ಯಭಾಗವನ್ನು ನಾನು ಸಿಧಾನವಾಗಿ ಓದಿ 'ಶಾಂತಿಃ ಶಾಂತಿಃ ಶಾಂತಿಃ' ಎಂದು ಉಚ್ಚರಿಸಿ ಹೊತ್ತಗೆಯನ್ನು ಕೆಳಗಿಟ್ಟೆ.

ಹೇರಂಬ ಇನ್ನೂ ಹಾಗೆಯೆ ಕುಳಿತಿದ್ದ. ಕಣ್ಣೀರು ಮೊದಲಿನಷ್ಟಿರ ಲಿಲ್ಲ. ಆದರೂ ಸುಮಾರಾಗಿ ಇದ್ದೇ ಇತ್ತು. ನಾನು ಮಾತ್ರ ಅದೆಂತಹ ಸುಖಸಮಾಧಿಯಲ್ಲಿದ್ದೆ! ಒಬ್ಬ ಸಹೃದಯನಾದ ಓದುಗ ನನ್ನ ಕಥೆಯ ನ್ನೋದಿ—ಅಲ್ಲ ಕೇಳಿ—ಭಾವಪರವಶನಾಗಿದ್ದಾನೆ! ಅದನ್ನು ನಾನು ಪ್ರತ್ಯಕ್ಷ—ನನ್ನ ಕಣ್ಣೆದುರಿನಲ್ಲಿಯೆ ಕಾಣುತ್ತಿದ್ದೇನೆ. ಸಾಹಿತಿಗೆ ಇದಕ್ಕೂ ಹೆಚ್ಚಿನ ಸುಖಕರವಾದ ಕ್ಷಣ ಬೇರೊಂದಿರಬಹುದೆ? ಎಷ್ಟು ಜನ ಸಾಹಿತಿ ಗಳು ತಮ್ಮ ಜೀವಮಾನದಲ್ಲಿ ಇಂತಹ ಸುಖವನ್ನು ಕಣ್ಣಾರೆ ಕಂಡು ಅನು ಭವಿಸಿದ್ದಾರೆ? ಆಗ ನನ್ನನ್ನು ನಾನೇ ಭಾಪು' ಎಂದುಕೊಂಡೆ. ಹರ್ಷಾತಿ ರೇಕದಿಂದ ಕೆಲಹೊತ್ತು ಮುಗ್ಧನಾಗಿ ಕುಳಿತುಬಿಟ್ಟೆ. ಹೀಗೆ ನಾವಿಬ್ಬರೂ ಮೌನದಲ್ಲಿಯೆ ಕೆಲವು ಕ್ಷಣಗಳನ್ನು ಕಳೆದೆವು ಇನ್ನು ಹಾಗೆಯೆ ಕೂಡುವುದೆಂತು? ಆಗ ನಾನೇ ಮಾತಿಗೆ ಮೊದಲು ಮಾಡಿದೆ:

"ಉಂ, ಕಥೆ ಹೇಗಿದೆ? ಕಥೆಯ ಬೆಳವಣಿಗೆ, ಅದರ ಕೊನೆ ಇವುಗಳ ಬಗ್ಗೆ ನಿನ್ನ, ಅಭಿಪ್ರಾಯವೇನು?"

"ಅವೆರಡನ್ನೂ ನಾನು ಕೇಳಲಿಲ್ಲ" ಮೂಗು ಒರಸುತ್ತ ಹೇಳಿದ ಹೇರಂಬ

"ಅಂದರೆ ? ಕಥೆಯನ್ನು ನೀನು ಪೂರ್ಣ ಕೇಳಿದೆಯಷ್ಟೇ? "

"ಇಲ್ಲ! ಅದು ಯಾವುದನ್ನೂ ನಾನು ಕೇಳಲಿಲ್ಲ! ಆ ಕಥೆಯ ಕಡೆಗೆ ನನ್ನ ಲಕ್ಷ್ಯವೇ ಇರಲಿಲ್ಲ...

"ಚೇಷ್ಟೆ ಮಾಡಬೇಡ, ನಾನು seriously ಕೇಳ್ತಾ ಇದ್ದೇನೆ!"

"ಚೇಷ್ಟೆ ಇಲ್ಲ; ನಿಜವಾಗಿಯೇ ಹೇಳ್ತಾ ಇದ್ದೇನೆ—ವರ್ಣನೆಯ ಭಾಗವನ್ನಷ್ಟು ಹಾಗೂ ಹೀಗೂ ಕೇಳಿದೆ; ಮುಂದೆ ಹೆಂಡತಿಯನ್ನು ಬಡಿಯುವದಕ್ಕೆಂದು ಕೋಲನ್ನೇನು ಗಂಡ ಎತ್ತಿದನಲ್ಲ—ಅದರ ಮುಂದೆ ನನ್ನ ಲಕ್ಷ್ಯವೇ ಉಳಿಯಲಿಲ್ಲ !"

"ಮತ್ತೆ ಆ ನಿನ್ನ ಕಣ್ಣೀರು, ಆ ಅನುಭಾವ ಪ್ರದರ್ಶನ, ಆ ಅಂತಃಕರಣದ ಕರಗು- ಇವೆಲ್ಲ ಯಾರಿಗಾಗಿ ? "

"ನನ್ನ ಹೆಂಡತಿಗಾಗಿ ! ಆಕೆ ತೀರಿಕೊಂಡು ಇಂದಿಗೆ ತಿಂಗಳಾಗಿ ಹೋಯಿತು. ನಾನೂ ಹೀಗೆಯೆ ಅವಳನ್ನೊಮ್ಮೆ ವಿನಾಕಾರಣ ಹೊಡೆದಿದ್ದೆ. ಅದು ಈಗ ನೆನಪಾಯಿತು. ಜೀವದಿಂದಿರುವಾಗ ಅವಳನ್ನು ಚೆನ್ನಾಗಿ ನಡೆಯಿಸಿಕೊಳ್ಳಲಿಲ್ಲವಲ್ಲಾ ಎಂದು ದುಃಖಬಂತು. ಅದರಿಂದ ನನಗೆ ಅಳು ಬಂತು ! ಕ್ಷಮಿಸು, ನಿನ್ನ ಕಥೆ ಇನ್ನೊಂದು ಸಲ ಓದಿಸಿ ಕೇಳುತ್ತೇನೆ; ಈಗ ಒಬ್ಬರಲ್ಲಿ ಊಟಕ್ಕೆ ಹೋಗಬೇಕು ! ಬರ್‍ತೇನೆ—ಅನುಕೂಲವಾದರೆ ಇನ್ನೊಮ್ಮೆ ಕಾಣ್ತೇನೆ. " ಎಂದವನೆ ಎದ್ದು ಹೊರಟೇ ಬಿಟ್ಟ ! ಔಪಚಾರಿಕವಾಗಿ ಸಂತಾಪ ಸೂಚಿಸಿ ನಾನೂ ಅವನಿಗೆ ಅಪ್ಪಣೆ ಕೊಟ್ಟೆ. ಅವನು ಹೊರಬೀಳುವುದೇ ತಡ-- 'ಹೋಗೋ ಮಗನೆ ಹೋಗು! " ಎಂದು ಬಾಯಿಂದ ಬಂದು ಬಿಟ್ಟಿತು !

ತಲೆಯೊಳಗಿಂದ ಈ ವಿಚಾರ ಮಾತ್ರ ಏನು ಮಾಡಿದರೂ ಹೋಗಲೊಲ್ಲದು. ಕೊನೆಗೊಂದು ಸಮಾಧಾನ ದೊರೆಯಿತು:-- ಸಾಹಿತ್ಯದ ಲಕ್ಷಣವೇನು ? ಒಳ್ಳೆಯ ಭಾವನೆಗಳಿಗೆ ಚಾಲನೆಯನ್ನು ಕೊಟ್ಟು ಅವನ್ನು ಉದ್ದೀಪನಗೊಳಿಸುವುದೇ ಅಲ್ಲವೇ? ನನ್ನ ಕಥೆಯಿಂದ ಹೇರಂಬನಲ್ಲಿ ಆದದ್ದೂ ಇಷ್ಟೇ ! ಸಾಕು—ಒಳ್ಳೆ ಹೆಸರಾಂತ ಸಾಹಿತಿಗಳಾದರೂ ಇದಕ್ಕೂ ಹೆಚ್ಚೇನು ಸಾಧಿಸಿದ್ದಾರೆ ?

---

# ಮೀರೆಯ ಮದ್ದು

ವಿರೂಪಾಕ್ಷನ ಪೂರ್ಣ ಹೆಸರು 'ವಿರೂಪಾಕ್ಷಭಟ್ಟ ಪರಮೇಶ್ವರ ಭಟ್ಟ ಅಗ್ನಿಹೋತ್ರಿ' ಎಂದು. ಹೆಸರಿನಲ್ಲಿ ಒತ್ತಕ್ಷರ ಹೆಚ್ಚು ಎಂದು, ಸಲಿಗೆ ಯವರು ಅವನನ್ನು 'ವಿ. ಪಿ.' ಎಂತಲೆ ಕರೆಯುತ್ತಿದ್ದರು. ವಿ. ಪಿ. ಮುನ್ಸೀಫ್ ಕೋರ್ಟಿನಲ್ಲಿ ಗುಮಾಸ್ತ. ಅವನಿಗೆ ೨೦ನೆಯ ವರ್ಷಕ್ಕೆ ಮದುವೆಯಾಗಿತ್ತು. ಮನೆಯಲ್ಲಿ ಅವನು, ಅವನ ಹೆಂಡತಿ, ನಾಲ್ಕು ಮಕ್ಕಳು. ಮುಪ್ಪಿನವರಾದ ತಂದೆ-ತಾಯಿ ಇಷ್ಟು ಜನ ಇದ್ದರು. ಗಂಗಾ-ಬಾಯಿ ವಿ. ಪಿ ಯ ಹೆಂಡತಿ. ಅವಳಿಗೆ ಗಂಡನೊಡನೆ ರಹಸ್ಯವೆಂದರೆ ಕೇವಲ ರಾತ್ರಿಯಲ್ಲಿಯೆ.

ಒಂದು ದಿನ ಗಂಗಾಬಾಯಿ, ನಿತ್ಯದ ಕೆಲಸಗಳಲ್ಲದೆ ಮೂರು ಸೇರು ಮೆಣಸಿನಕಾಯಿ ಪುಡಿ ಕುಟ್ಟಿ, ಒಂದು ಪಡಿ ಮೆಂಥೆಯದ ಹಿಟ್ಟು ಬೀಸಿ ದ್ದಳು. ಬೆರಳುಗಳೆಲ್ಲ ಉರಿಬಿದ್ದಿದ್ದುವು, ಕೈಗಳು ಸೇದುತ್ತಿದ್ದುವು. ತುಂಬ ಆಯಾಸವಾಗಿತ್ತು. ಮೆಣಸಿನಕಾಯಿ ಬಿಸಿಮಾಡುವಾಗ ಅರ್ಧಾ ಣೆಯಗಲ ಸೀರೆ ಸುಟ್ಟುಕೊಂಡಿದ್ದಳು. ಅದನ್ನು ಆರಿಸುವುದಕ್ಕೆ ಹೋಗಿ ಅವಸರದಲ್ಲಿ ಒಳ್ಳೆಣ್ಣೆಯ ಬಾಟ್ಲಿಯನ್ನು ಉರುಳಿಸಿದಳು. ಆದುದರಿಂದ ಅತ್ತೆ ಅವಳನ್ನು ಬೈದಿದ್ದಳು ಉದ್ದೇಶಪೂರ್ವಕ ಯಾವುದನ್ನೂ ಮಾಡಿ ರಲಿಲ್ಲ ಅವಳು ಎಂತಲೆ ಮನಸ್ಸಿಗೆ ಬಹಳ ವ್ಯಥೆಯಾಗಿತ್ತು. ರಾತ್ರಿಯ ಊಟ, ಉಡುಸಾರಣೆ ಮುಗಿಸಿ, ಕೋಣೆಗೆ ಬರುವ ಹೊತ್ತಿಗೆ ಹನ್ನೊಂದು ಘಂಟೆಯಾಗಿತ್ತು. ವಿರೂಪಾಕ್ಷ ಹಣೆಗೆ ಅಮೃತಾಂಜನ ತಿಕ್ಕಿಕೊಳ್ಳುತ್ತ ಹಾಸಿಗೆಯ ಮೇಲೆ ಒರಗಿದ. ಅವನ ಪಕ್ಕದಲ್ಲಿಯೆ ಎರಡು ಸಣ್ಣ ಮಕ್ಕಳು ಮಲಗಿದ್ದುವು. ಗಂಗಾಬಾಯಿ ಬಾಗಿಲಿಕ್ಕಿ ಒಳಕ್ಕೆ ಬಂದಳು; ದೀಪ ಸಣ್ಣಗೆ ಮಾಡಿದಳು. ಎರಡೂ ಮಕ್ಕಳನ್ನೆತ್ತಿ ತನ್ನ ಹಾಸಿಗೆಯ ಮೇಲೆ ಮಲಗಿಸಿ, ಗಂಡನ ಹತ್ತಿರ ಒಂದು ಕುಳಿತಳು.

"ಏನು ತಲೆನೋಯುತ್ತದೇನು ?"

"ಹೌದು, ಅರೆತಲೆಶೂಲಿ ! ಆರುಗಂಟೆಯಿಂದ ಎಡಗಡೆಯ ಮೆಲು ಕಿನಲ್ಲಿ ಚೇಳು ಕಡಿದ ಹಾಗೆ ಬಾಧೆ!"

ತನ್ನ ದುಃಖ ವೇದನೆ ಎಲ್ಲಿಯೋ ಹೋಯಿತು ಗಂಗಾಬಾಯಿಗೆ. 'ಗಂಡ ತಲೆಶೂಲಿಯಿಂದ ವ್ಯಥೆಪಡುತ್ತಿರುವನಲ್ಲಾ' ಎಂದು ಕಳವಳವಾ

ಯಿತು ಅವಳಿಗೆ. ತಾನೂ ಇಷ್ಟು ಅಮೃತಾಂಜನ ತೆಗೆದುಕೊಂಡು ತಿಕ್ಕಿದಳು, ಮೆಲ್ಲಕನ್ನು ಹತ್ತಿಕ್ಕಿದಳು.

"ಈಗ ತುಸ ಕಡಿಮೆ ಆಯಿತೇ ?"

"ಸ್ವಲ್ಪ ಆದ ಹಾಗೆ ಅನಿಸ್ತಾ ಇದೆ !"

"ಕಾಲೊತ್ತಲೇನು ?"

"ಛೇ, ಬೇಡ ! ನೋಯುವುದಿಲ್ಲ, ಸುಮ್ಮನೆ ಯಾಕೆ ? "

ಆದರೂ ಗಂಗಾಬಾಯಿ ಕೇಳಲಿಲ್ಲ. ಕಾಲೊತ್ತಲು ತೊಡಗಿದಳು. ದೀಪ ತೀರ ಸಣ್ಣದಾಗಿತ್ತು; ಅವಳ ಮುಖ ಕಾಣುತ್ತಿರಲಿಲ್ಲ. ವಿರೂಪಾಕ್ಷನಿಗೆ ತನ್ನ ಕಾಲಮೇಲೆ ನೀರ ಹನಿ ಬಿದ್ದಹಾಗೆ ಎನಿಸಿತು. ಚಟ್ಟನೆ ಎದ್ದು ಕುಳಿತ. ಗಂಗಾಬಾಯಿ ಕೇಳಿದಳು:

"ಏನು ಎದ್ದಿರಿ ?"

"ಕಾಲಮೇಲೆ ಹನಿ ಬಿದ್ದಹಾಗಾಯಿತು; ಅಳುತ್ತಾ ಇದ್ದೀಯಾ?"

ಅವಳ ಗಲ್ಲದ ಮೇಲೆ ಕೈಯಾಡಿಸಿದ; ಬೆರಳುಗಳು ಕಣ್ಣೀರಿಂದ ಒದ್ದೆಯಾದುವು.

"ಇದೇನು ಗಂಗೂ, ಏನಾಯಿತು ?"

"ಏನೂ ಇಲ್ಲ! ಏನೋ ತಾಯಿಯ ನೆನಪಾಯ್ತು, ಕಣ್ಣಲ್ಲಿ ನೀರು ಬಂತು !"

"ನಿನ್ನ ತಾಯಿ ತೀರಿ ಹತ್ತು ವರ್ಷಗಳಾದುವು. ಈಗಲೂ ಅವಳ ನೆನಪಾದರೆ ನಿನಗೆ ಕಣ್ಣೀರು ಬರುವುದೇ ? ನನಗೆ ನಂಬಿಕೆ ಸಾಲದು, ಇನ್ನೇನಾದರೂ ಕಾರಣವಿರಬೇಕು !"

"ಛೆ, ಇಲ್ಲ! ಬೇರೆ ಏನಿದೆ ? ಏನೂ ಇಲ್ಲ !"

"ಇಲ್ಲ, ಏನೋ ಇಂದು ಆಗಿರಬೇಕು ! ಅತ್ತೆ-ಸೊಸೆಯರ ಜಗಳ ವಿರಬೇಕು. ಅಥವಾ ನೆರೆಮನೆಯವರು ದೂರಿಕೊಂಡಿರಬೇಕು !"

"ಅದಾವುದೂ ಇಲ್ಲ! ಹೋಗಲಿ ಬಿಡ್ರಿ, ನಿಮಗೆ ಮೊದಲೇ ತಲೆ ಶೂಲಿ; ನೀವು ತಣ್ಣಗೆ ಮಲಗಿಕೊಳ್ರಿ !"

"ಇನ್ನು ನಿದ್ದೆ ಬರುವುದು ಸಾಧ್ಯವೇ ಇಲ್ಲ! ಏನು ಹೇಳು, ನೀನು ಹೇಳಲೇಬೇಕು! "

ಗಂಗಾಬಾಯಿ ಜರುಗಿದ ಸಂಗತಿಯನ್ನೆಲ್ಲ ಹೇಳಿದಳು:

"ಅತ್ತೆಯವರು ಸಾಮಾನ್ಯವಾಗಿ ಎಂದೂ ಹೀಗೆ ಸಿಟ್ಟು ಮಾಡುವುದಿಲ್ಲ. ಇಂದೇ ಯಾಕೋ ಅವರಿಗೆ ಹೆಚ್ಚಾಗಿ ಕೋಪ ಬಂತು. ನಾನೇನು ಬೇಕಾಗಿ ಹಾಗೆ ಮಾಡಿರಲಿಲ್ಲ. ಕೈತಪ್ಪಿ ಆಯಿತು. ಆದರೂ ಅನಿಸಿಕೊಳ್ಳುವುದು ತಪ್ಪಲಿಲ್ಲ. ಹೆಣ್ಣಿನ ಜನ್ಮ ಯಾತಕ್ಕೂ ಬೇಡ. ಎಷ್ಟು ಮಂದಿಗೆ ಹೆದರಿ ನಡೆಯಬೇಕು? ಸಾಯುವವರೆಗೂ ಒಬ್ಬರ ಅಧೀನ ಅವರಿಗೆ ತಪ್ಪಿದ್ದಲ್ಲ! ನೀವು ಏನೇ ಅಂದರೂ ನನಗಷ್ಟು ಹತ್ತುವುದಿಲ್ಲ; ಮರುಕ್ಷಣದಲ್ಲಿಯೆ ಅದನ್ನು ಮರೆತುಬಿಡುತ್ತೇನೆ ಆದರೆ ಬೇರೆಯವರು ಒಂದು ಸಣ್ಣ ಮಾತನಾಡಿದರೂ ನನಗೆ ಸಹನವಾಗದಷ್ಟು ನೋವಾಗುತ್ತದೆ!"

"ಆದರೆ ನನ್ನ ತಾಯಿ 'ಬೇರೆ ಯಾರೂ' ಅಲ್ಲ! ನನಗಾಗಿ ಅದನ್ನು ನೀನು ಸಹಿಸಬೇಕು!'

" ಸಹಿಸುತ್ತೇನೆ, ಆದರೂ ಒಮ್ಮೊಮ್ಮೆ ತಾಳ್ಮೆ ಉಳಿಯುವುದಿಲ್ಲ. ನಿಮ್ಮೆದುರು ಒಮ್ಮೆ ಅತ್ತುಬಿಟ್ಟರೆ, ಅಲ್ಲಿಗೆ ಅದು ಮುಗಿದ ಹಾಗೆ. ದುಃಖ ಹಗುರಾಗುವುದಕ್ಕೆ ಇದೊಂದೇ ಉಪಾಯ. ಅತ್ತೆಯವರ ವಿರುದ್ಧ ನಾನು ದೂರುಹೇಳುತ್ತೇನೆ ಎಂದು ತಿಳಿಯಬೇಡಿ. ಇಬ್ಬರೂ–ಅತ್ತೆಮಾವ ನನ್ನ ಮೇಲೆ ಅದೆಷ್ಟೋ ಪ್ರೀತಿ ಮಾಡುತ್ತಾರೆ. ಮನೆಯಲ್ಲಿ ಯಾವುದಕ್ಕೂ ಕೊರತೆಯಿಲ್ಲ. ಬಂಗಾರದ ಹಾಗೆ ನಾಲ್ಕು ಮಕ್ಕಳಿವೆ. ಹಿಂದಿನ ಜನ್ಮದಲ್ಲಿ ಅದೇನು ಪುಣ್ಯಮಾಡಿದ್ದೆನೊ, ನಿಮ್ಮ ಕೈಹಿಡಿದಿದ್ದೇನೆ. ಎಲ್ಲ ಸೌಖ್ಯವಾಗಿಯೆ ಇದೆ. ಇಷ್ಟೆಲ್ಲ ಇದ್ದರೂ ಯಾಕೋ ಒಂದು ಬಗೆಯ ಅತೃಪ್ತಿ! ಹನ್ನೆರಡು ವರ್ಷ ಕೂಡಿಯಿದ್ದರೂ ಇದ್ದ ಹಾಗೇ ಎನಿಸಲೊಲ್ಲದು ನನಗೆ! ನಾವು ಎಂದಾದರೂ ಇಬ್ಬರೇ ಸ್ವತಂತ್ರವಾಗಿ ಇರಬಹುದೇ?"

"ನನಗೂ ಹೀಗೇ ಎನಿಸತಾ ಇದೆ. ನಿನ್ನ ಮುಂದೆ ನಾನಿದನ್ನು ಇದುವರೆಗ ಆಡಿ ತೋರಿಸಿರಲಿಲ್ಲ. ಇಂದು ನೀನೇ ಈ ಮಾತನ್ನು ತೆಗೆದೆ. ನನಗೂ ಯಾಕೋ ಈ ಮನೆ ಬೇಜಾರು ಬಂದಿದೆ! ಈ ಊರು ಬೇಜಾರು ಬಂದಿದೆ! ಯಾರೂ ಗುರುತಿಲ್ಲದ ಊರಿಗೆ ಹೋಗಿ, ನಾವಿಬ್ಬರೇ ಸ್ವೇಚ್ಛೆಯಾಗಿ ಇರಬೇಕು—ಎಂದು ಎನಿಸ್ತಾ ಇದೆ."

" ಆದರೆ ಅದು ಹ್ಯಾಗೆ ಸಾಧ್ಯ ? ಹಾಗೆ ಬಿಟ್ಟುಹೋದರೆ, ಅತ್ತೆ ಮಾವ ಬಹುವಾಗಿ ನೊಂದುಕೊಂಡಾರು !"

" ಛೆ, ಹಾಗೆ ಬಿಟ್ಟಾಗಿ ಹೋಗುವ ಹಾಗಿಲ್ಲ ! ಒಂದು ಉಪಾಯ ದಿಂದ ಹೋಗಬೇಕು !"

" ಹಾಗೆ ಸಾಧ್ಯವಿದ್ದರೆ ನೋಡ್ರಿ, ನನಗೂ ಕೆಲವು ದಿನ ಇಬ್ಬರೇ ಇರೋಣಾ— ಎಂದು ಆಶೆ !"

"ಹೋಗುವುದು ಎಂದರೆ ವರ್ಗ ಮಾಡಿಸಿಕೊಳ್ಳಬೇಕು. ಅದೂ ನಾವು ಕೇಳದಯೆ— ಮೇಲಿಂದಲೇ— ಹಾಗೆ ಹುಕುಮು ಬಂತು ಎಂದು ತಂದೆಯವರಿಗೆ ತೋರಿಸಬೇಕು !"

" ಆ ಉಪಾಯಗಳು ನಿಮಗೇ ಗೊತ್ತು. ಒಂದೆರಡು ವರ್ಷಗಳಾ ದರೂ ಬೇರೆ ಇದ್ದು ಬರೋಣ. ಏನ ಆದರೂ ಮಾವನವರು ಈ ಊರು ಬಿಡುವವರಲ್ಲ !"

" ಅದು ನಿಜ. ನೋಡೋಣ, ಪ್ರಯತ್ನವನ್ನಂತೂ ಮಾಡೋಣ !"

[೨]

ಹೆಂಡತಿಯೊಡನೆ ಮಾತಾದ ಮರುದಿನವೆ, ' ವಿ. ಪಿ. ' ಶಿರಸ್ತಾರ ರನ್ನು ಕಂಡು, ಟ್ರಾನ್ಸ್ಫರಿಗೆ ಬರೆದುಕೊಂಡ. ಎರಡು ತಿಂಗಳು ಆ ಕಾಗದ ಶಿರಸ್ತಾರರ ದಫ್ತರಿನಲ್ಲಿಯೆ ಇತ್ತು. ಒಂದು ದಿನ ಅವರು ' ವಿ. ಪಿ. 'ಯನ್ನು ಕರೆದು ಹೇಳಿದರು: " ಶಿರಸಿಗೆ ಹೋಗುವ ಹಾಗಿದ್ದರೆ ಹುಕುಮು ಮಾಡಿಸ ಬಹುದು !" ಎಂದು. ವಿರೂಪಾಕ್ಷ ಒಪ್ಪಿದ. ಹದಿನೈದು ದಿನಗಳಲ್ಲಿ ಹುಕುಮು ಬಂದಿತು. ಆ ಹುಕುಮಿನ ಮೇರೆಗೆ ' ವಿ. ಪಿ. ' ತನ್ನ ಹೆಂಡತಿ, ಎರಡು ಮಕ್ಕಳು ಇವರೊಡನೆ ಶಿರಸಿಗೆ ಹೊರಟು ಬಿಟ್ಟ.

ಪರಮೇಶ್ವರಭಟ್ಟರಿಗೆ ಬಲು ಕೆಡಕೆನಿಸಿತು— ಮುಪ್ಪಿನ ಕಾಲಕ್ಕೆ ಮಗ, ಸೊಸೆ ಅಗಲುತ್ತಾರೆ ಎಂದು. ಇಬ್ಬರು ಮೊಮ್ಮಕ್ಕಳನ್ನು ತಮ್ಮ ಹತ್ತಿರ ಇರಿಸಿಕೊಂಡರು. ನಿರ್ವಾಹವಿಲ್ಲದೆ ಮಗ, ಸೊಸೆ ಇಬ್ಬರನ್ನೂ ಕಳುಹಿದರು.

ಶಿರಸಿಯಲ್ಲಿ ‘ ವಿ. ಪಿ. ’ ಒಂದು ಬಾಡಿಗೆ ಮನೆ ಹಿಡಿದ. ಪೂರಾ ಮನೆಯಲ್ಲ; ಮನೆಯ ಒಂದು ಭಾಗ. ಮಿಕ್ಕ ಮನೆಯಲ್ಲಿ ಮನೆಯವರು ಇರುತ್ತಿದ್ದರು.

‘ ವಿ. ಪಿ ’ ಕೆಲಸ ಮುಗಿಸಿ ಮನೆಗೆ ಬಂದನೆಂದರೆ ಎಲ್ಲಿಯೂ ಹೋಗುತ್ತಿರಲಿಲ್ಲ. ಹೆಂಡತಿ-ಮಕ್ಕಳಜೊತೆಗೆ ಹೊತ್ತು ಕಳೆಯುವ. ಗಂಗಾ ಬಾಯಿಗೂ ಗಂಡನೊಡನೆ ಎಷ್ಟು ಮಾತನಾಡಿದರೂ ಸಾಲದು; ಎಷ್ಟು ನಗೆ ಯಾಡಿದರೂ ಸಾಲದು. ಮನೆಯಲ್ಲಿ ಕೆಲಸವೇ ಇಲ್ಲ—ಎನಿಸುವುದು. ಇಬ್ಬರೂ ಕೂಡಿ ಚಹ ಕುಡಿಯುವರು, ಕೂಡಿಯೆ ಊಟಕ್ಕೆ ಕೂಡುವರು, ಸಾಯಂಕಾಲ ತಿರುಗಾಡಲು ಹೋಗುವರು, ಸಿನೇಮಾಕ್ಕೆ ಹೋದರೆ ಕೂಡಿಯೆ ಹೋಗುವರು. ಗಂಗಾಬಾಯಿ ಅಡಿಗೆ ಮಾಡುವಾಗ ‘ವಿ. ಪಿ.’ ಅಲ್ಲಿಯೇ ಕುಳಿತು ಬಿಡುವ, ಐಸು ಪೈಸು ಹರಟೆ ಹೊಡೆಯುವ.

ಗಂಡ ಕೋರ್ಟಿಗೆ ಹೋದನೆಂದರೆ ಗಂಗಾಬಾಯಿಗೆ ಕೆಲಸವೇ ಇರುತ್ತಿರಲಿಲ್ಲ ಒಬ್ಬಳೇ ಕೂಡುವಳು. ಬೇಸರು ಬರಬೇಕು. ಮನಸ್ಸಿನಲ್ಲಿ ಒಂತು—ನೆರೆಮನೆಯವರ ಗುರುತು ಮಾಡಿಕೊಳ್ಳಬೇಕೆಂದು. ಹೋಗ ತೊಡಗಿದಳು. ಬರುಬರುತ್ತ ವಿಧವೆಯಾದ ಮೀರಾ, ಮಧ್ಯಾಹ್ನದ ಹೊತ್ತಿನಲ್ಲಿ ಗಂಗಾಬಾಯಿಯ ಮನೆಯಲ್ಲಿಯೇ ಕೂಡಲು ತೊಡಗಿದಳು. ಅವಳ ಮನೆಯಲ್ಲಿ ಮುಪ್ಪಿನವರಾದ ತಂದೆ-ತಾಯಿ, ಒಬ್ಬ ಅರೆಹುಚ್ಚನಂತಿರುವ ತಮ್ಮ. ಅವಳ ಒಬ್ಬ ಅಣ್ಣ ಬೊಂಬಾಯಿಯಲ್ಲಿ ಇರುತ್ತಿದ್ದ. ಗಂಗಾ ಬಾಯಿಯ ಎರಡೂ ಮಕ್ಕಳು ದಿನವೆಲ್ಲ ಅವಳ ಹತ್ತಿರವೇ ಇರುವುವು. ಅವಳೇ ತಾಯಿಯೇನೋ ಎನ್ನುವಷ್ಟು ಅವಳ ಅಭ್ಯಾಸವಾಯ್ತು— ಆ ಕೂಸುಗಳಿಗೆ.

ಮೀರಾಗೆ ಮಾತು ಹೆಚ್ಚು ಬೇಕಾಗಿಲ್ಲ ಎನಿಸಿದ್ದನ್ನೆಲ್ಲ ಆಡಿ ಬಿಡುವುದು ಗಂಗಾಬಾಯಿಯ ರೀತಿ, ಮಂದಿಯುದನ್ನೆಲ್ಲ ಕೇಳಿ ಮನಸ್ಸಿನಲ್ಲಿಡುವುದು ಮೀರಾನ ನೀತಿ. ಗಂಗಾಬಾಯಿಗೆ ಕಪಟವೆಂಬುದು ಗೊತ್ತೇ ಇರಲಿಲ್ಲ. ಮಂದಿ ಆಡುವುದೆಲ್ಲ ನಿಜ ಎಂದು ನಂಬಿಬಿಡುವಳು. ಅವಳಿಗೆ ಕಣ್ಣೀರನ್ನು ತರಿಸುವುದು ಬಲು ಸುಲಭ. ಇದರ ಇನ್ನೊಂದು ತುದಿ ಮೀರಾ. ಅವಳ ವಿಷಯ ‘ ವಿ. ಪಿ. ’ಗೆ ಹೆಂಡತಿಯಿಂದ ತಿಳಿದು ಬಂದಿತ್ತು.

ಮೊದಮೊದಲು 'ವಿ. ಪಿ. ' ಮನೆಗೆ ಬರುವುದರೊಳಗಾಗಿ ಅವಳು ಬಂದು ಕುಳಿತು ಹೋಗಿರುತ್ತಿದ್ದಳು. ಕೆಲವು ದಿನಗಳ ಮೇಲೆ, ಅವನು ಬಂದಿರುವಾಗಲೂ ಕೂಡುವಳು, ಗಂಗಾಬಾಯಿಯೊಡನೆ ಹರಟೆ ಹೊಡೆಯುವಳು. ಒಮ್ಮೆ ವಿ. ಪಿ. ಅವಳನ್ನು ಓರೆಗಣ್ಣಿನಿಂದ ನೋಡಿದ್ದ. ಆಗ ಅವನ ದೃಷ್ಟಿಯನ್ನು ಆಕೆ ಎದುರಿಸಿದ್ದಳು. ಅದರಲ್ಲಿ ಆಶೆ ಇತ್ತು, ಔತ್ಸಣವಿತ್ತು. ವಿ. ಪಿ. ಇದನ್ನು ಗುರುತಿಸದೆ ಇರಲಿಲ್ಲ. ಅಂದಿನಿಂದ ಪರಸ್ಪರರನ್ನು ನೋಡುವುದರಲ್ಲಿ ಇಬ್ಬರಿಗೂ ಸುಖವೆನಿಸಹತ್ತಿತು. ಅವನು ಮಗುವನ್ನೆತ್ತಿಕೊಂಡಿರುವಾಗ ಮೀರಾ ಬೇಕಾಗಿಯೆ ಅಲ್ಲಿಗೆ ಬರುವಳು. ಅವಳನ್ನು ನೋಡಿ ಮಗು ಅಳುವುದು; ಆ ಮೇಲೆ ಮಾತಿಗೆ ಮಗು ಒಂದು ನಿಮಿತ್ತವಾಗುವುದು. ಮುಂದೆ ಗಂಗಾಬಾಯಿ ಇರಲಿ ಬಿಡಲಿ, ವಿ. ಪಿ. ಮತ್ತು ಮೀರಾ ಯಾವ ಸಂಕೋಚವೂ ಇಲ್ಲದೆ ಸಲುಗೆಯಿಂದ ಕುಳಿತು ಮಾತನಾಡುವರು; ನಕ್ಕು ಕೆಲೆಯುವರು.

ಒಂದು ದಿನ, ರಾತ್ರಿ ಹತ್ತುಗಂಟೆಯ ಹೊತ್ತು. ದಿಡ್ಡಿಯ ಬಾಗಿಲನ್ನು ಮುಚ್ಚಿ ಬಂದು ಮಲಗುವ ವಿಚಾರ ವಿ. ಪಿ ಯದು. ಹೊರಗೆ ಬಂದ, ದಿಡ್ಡಿಬಾಗಿಲ ಹತ್ತಿರವೇ ಉರುವಲ ಇಡುವ ಕೊಟ್ಟಿಗೆ. ದಿನಾಲು ಬಾಗಿಲು ಮುಚ್ಚಿ ಇರುವುದು ಇಂದು ತೆರೆದಿತ್ತು. ಹತ್ತಿರ ಹೋಗಿ ಹೀಗೆ ಹಣೆಯಿಕ್ಕಿ ನೋಡಿದ.

"ನಾನು ಮೀರಾ!" ಮೆಲುದನಿ ಕೇಳಬಂತು

"ಕತ್ತಲಲ್ಲಿ ಇಲ್ಲಿ ಯಾಕೆ?"

"ನಿಮಗಾಗಿ!"

ಇವನು ಒಳಗೆ ಹೋದ. ಹತ್ತಿರ ಬಂದಳು; ಅಪ್ಪಿಕೊಂಡು ಬಿಟ್ಟ. ಅದರಲ್ಲಿ ಕಾವಿತ್ತು, ಆವೇಶವಿತ್ತು, ತನ್ಮಯತೆಯಿತ್ತು, ಸಂಭ್ರಮವಿತ್ತು!

ಮನೆಯ ಬಾಗಿಲು ಕಿರ್ರೆಂದಿತು. ಅವಳ ತಮ್ಮ ಹೊರಗೆ ಬಂದ. ಮೀರಾ ಕೊಟ್ಟಿಗೆಯಿಂದ ಹೊರಗೆ ಬಂದಳು.

"ಏನು ಮಾಡುತ್ತೀಯೆ?" ತಮ್ಮ ಕೇಳಿದ.

ಕೊಟ್ಟಿಗೆಗೆ ಬೀಗ ಹಾಕುತ್ತೇನೆ!"

ಅವನೂ ಅಲ್ಲಿಗೆ ಬಂದೇಬಿಟ್ಟ; ಮೀರಾ ಬಾಗಿಲನ್ನು ಎಳೆದುಕೊಂಡಳು.

"ನಾನು ಬೀಗಹಾಕುತ್ತೇನೆ, ತಾ !" ಎಂದ ತಮ್ಮ.

"ಬೇಡ ಬೇಡ, ನಾನೇ ಹಾಕುತ್ತೇನೆ, ನೀನು ಹೋಗು !" ಎಂದಳು ಮೀರಾ.

ತಮ್ಮ ಕೇಳಲಿಲ್ಲ. ಅವಳ ಕೈಯಲ್ಲಿಯ ಬೀಗವನ್ನು ಕಸಿದುಕೊಂಡು ಹಾಕಿಯೇ ಬಿಟ್ಟ. ಬೀಗದ ಕೈ ಕೊಡೆಂದು ಮೀರಾ ಕೇಳಿದಳು; ಅವನು ಕೊಡಲಿಲ್ಲ ಅರೆಹುಚ್ಚೇ ಅದು. ಇಬ್ಬರೂ ಮನೆಯೊಳಕ್ಕೆ ಬಂದರು. ಕೈಗಳ ಸರವನ್ನು ಗೂಟಕ್ಕೆ ತೂಗು ಹಾಕಿ ತಮ್ಮ ಹೋಗಿ ಮಲಗಿಕೊಂಡ. ಇದೊಂದು ಮಹದುಪಕಾರ ಎಂದೆನಿಸಿತು ಮೀರಾಗೆ. ತುಸುಹೊತ್ತು ಸುಮ್ಮನೆ ಹಾಸಿಗೆಯ ಮೇಲೆ ಮಲಗಿದ ಹಾಗೆ ಮಾಡಿದಳು; ಆ ಮೇಲೆ ಮೆಲ್ಲಗೆ ಹೊರಗೆ ಬಂದು ಕೊಟ್ಟಿಗೆಯ ಬಾಗಿಲನ್ನು ತೆರೆದಳು. ವಿ. ಪಿ. ಹೊರಗೆ ಬಂದ.

"ಒಳ್ಳೇ ಗಂಡಾಂತರಕ್ಕೇ ಬಂದಿತ್ತು. ದೇವರೇ ಮರ್ಯಾದೆ ಉಳಿಸಿದ. ಒಳಗೆ ಯಮಬಾಧೆ. ನೂರಾರು ಗುಂಗಾಡು; ಸಾವಿರಾರು ಚಿಕ್ಕಾಡು; ಹತ್ತಿಪ್ಪತ್ತು ಇಲಿಗಳ ತಂಡ ! ನನ್ನ ಮೈ ನನ್ನ ಸ್ವಾಧೀನದಲ್ಲಿರ ಲಿಲ್ಲ." ವಿ. ಪಿ. ಎಂದ.

"ಪಾಪ, ನಿಮಗೆ ಬಲು ಕಷ್ಟಕೊಟ್ಟೆ !" ಮೀರಾ ನುಡಿದಳು.

ಈ ಮಾತು ನಡೆದಾಗ ಗಂಗಾಬಾಯಿ 'ಗಂಡ ಹೊರಗೆ ಹೋದವರು ಬರಲಿಲ್ಲ.' ಎಂದು ಕಿಟಕಿಯಲ್ಲಿ ಇಣುಕಿ ನೋಡಿದಳು. ಇಬ್ಬರೂ ಜೊತೆ ಗೂಡಿ ನಿಂತಿರುವುದು ಕಣ್ಣಿಗೆ ಬಿತ್ತು. ಮೈಯನವಿರು ನೆಟ್ಟಗಾದುವು. ಅಲ್ಲಿ ನಿಲ್ಲುವುದಾಗಲಿಲ್ಲ. ಒಳಗೆ ಬಂದು ಹಾಸಿಗೆಯ ಮೇಲೆ ಬಿದ್ದು ಬಿಟ್ಟಳು.

ಹೆಚ್ಚು ಹೊತ್ತು ನಿಲ್ಲದೆ ಮೀರಾ—ವಿ. ಪಿ. ಇಬ್ಬರೂ ತಮ್ಮ ತಮ್ಮ ಮನೆ ಸೇರಿದರು.

ವಿ. ಪಿ. ತಿಳಿದುಕೊಂಡ—ಹೆಂಡತಿಗೆ ನಿದ್ದೆ ಹತ್ತಿದೆಯೆಂದು. ತಾನೂ ಸದ್ದು ಮಾಡದೆ ಹಾಸಿಗೆ ಮೇಲೆ ಬಂದು ಒರಗಿದ. ಇಬ್ಬರಿಗೂ ನಿದ್ದೆ ಇಲ್ಲ. ಕಾಮನ ರಾಜ್ಯದೊಳಗಿನ ಈ ಕಣ್ಣುಮುಚ್ಚಾಲೆಯನ್ನೂ ಈ ಕೊಂಕು ಡೊಂಕುಗಳನ್ನೂ ಅರಿಯಳು ಗಂಗಾಬಾಯಿ. ಪಾಪ, ಗಂಗಾ

ಬಾಯಿಯೆಂದರೆ ಅದೊಂದು ಮುಗ್ಧ ಜೀವ! ನಿಷ್ಪಾಪ ಹೃದಯ! ಅವಳ ಜೀವನತಡಾಗದ ತಿಳಿನೀರು ಕಲಕಿದುದು ಅಂದೆಯೇ! ಆ ಕಲಮಲದಲ್ಲಿ ಸಾವಿರಾರು ಅಪ್ರಬುದ್ಧ ವಿಚಾರಗಳೂ, ಅಸಂಬದ್ಧ ಕಲ್ಪನಾತ್ಮಕ ದೃಶ್ಯಗಳೂ ರಾಶಿ-ರಾಶಿಯಾಗಿ ಆಕೆಗೆ ಕಾಣತೊಡಗಿದುವು ಕಂಬನಿಗಳ ಒಂದೆಸವನೆ ತೊಟಕುತೊಟಕಾಗಿ ಹೋಗುತ್ತಾ ಇದ್ದುವು. ಆ ಸ್ಥಿತಿಯಲ್ಲಿಯೆ ನಿದ್ದೆ ಬಂತು ಅವಳಿಗೆ! ಅದರಲ್ಲಿ ಭಯಾನಕ ಕನಸುಗಳು—ವಿಕಪಿಕಾರದ ರೂಪಗಳು! ಅದೊಂದು ಕಾಳರಾತ್ರಿ!

ವಿ. ಪಿ. ಯದು ಹಾಗಲ್ಲ ಬರುವುವೆಲ್ಲ ಸವಿಗನಸುಗಳು. ಎಲ್ಲವೂ ಹೃದ್ಯ!

ಆ ರಾತ್ರಿಯ ಕಗ್ಗತ್ತಲೆಯಲ್ಲಿಯೇ ಆ ಮನೆಯಲ್ಲಿ 'ಇದಿ (ವಿಧಿ)' ಸೇರಿಕೊಂಡಿತು!

[೩]

ಒಂದೆರಡು ತಿಂಗಳುಗಳು ಕಳೆದುವು. ಈ ಅವಧಿಯಲ್ಲಿ ಒಂದು ದಿನವೂ ವಿ. ಪಿ. ಹೆಂಡತಿಯೊಡನೆ ಸರಸವಾಡಿದುದಿಲ್ಲ, ಸ್ವೈರಣೆ ತೋರಿದುದಿಲ್ಲ ಮಾತುಮಾತಿಗೂ ತಿಕ್ಕಾಟ, ಬಿರುನುಡಿ. ಗಂಗಾಬಾಯಿ ಮಕ್ಕಳನ್ನು ಸುಮ್ಮಸುಮ್ಮಗೆ ಹೊಡೆಯುವಳು. ಒಮ್ಮೊಮ್ಮೆ ಅಳುತ್ತಾ ಕುಳಿತುಬಿಡುವಳು. ತನ್ನನ್ನು ತವರುಮನೆಗೆ ಕಳುಹಬೇಕೆಂಬ ಹಟ ದಿನವೂ ನಡೆದೇ ನಡೆಯುತ್ತಿತ್ತು.

ಮೀರಾ ಈಗ ಗಂಗಾಬಾಯಿಯಲ್ಲಿಗೆ ಬರುತಿರಲಿಲ್ಲ. ಒಂದು ದಿನ ತಾಯಿಯ ಕಣ್ಣು ತಪ್ಪಿಸಿ ಮಕ್ಕಳು ಅವಳ ಹತ್ತಿರ ಬಂದಿದ್ದುವು ಅದಕ್ಕಾಗಿ ಬಡಿತ ಬಿದ್ದಿತ್ತು ಅವರಿಗೆ! ಮೀರಾಗೆ ಕಾರಣ ತಿಳಿಯದೆ ಇರಲಿಲ್ಲ. ಆದರೂ ವಿ. ಪಿ. ಯೊಡನೆ ಅವಳು ನಡೆಯಿಸಿರುವ ರಹಸ್ಯ ದಿನದಿನಕ್ಕೆ ಬೆಳೆಯುತ್ತಲೆ ಇತ್ತು.

ವಿ. ಪಿ. ಗೆ ಒಂದು ದೊಡ್ಡ ಯೋಚನೆ. ಒಂದು ದಿನ ಮೀರೆಯನ್ನೇ ಕೇಳಿದ. ಮೀರಾ ನುಡಿದಳು. "ನನಗೂ ಇದೇ ಯೋಚನೆ. ಹೀಗೇ ಎಷ್ಟು ದಿನ ನಾವು ಅಳುಕಿನಲ್ಲಿ ಕಳೆಯಬೇಕು? ಇದಕ್ಕೊಂದು ಉಪಾಯ ಕಾಣಲೇ ಬೇಕು!"

"ನೀನೇ ಆ ಉಪಾಯ ತೆಗೆ. ನನಗಂತೂ ಏನೂ ತೋಚದು. ನೀನು ಏನು ಮಾಡೆಂದರೂ ನಾನು ಸಿದ್ಧ!"

"ಕೆಲವು ದಿನ ನಿಮ್ಮಾಕೆಯನ್ನು ತವರುಮನೆಗೆ ಕಳಿಸಿಬಿಡ ಬೇಕು!"

"ಛೆ, ಛೆ, ಅದು ಸರಿಹೋಗದು! ಈ ವಿಷಯ ಯಾರಿಗೂ ತಿಳಿಯು ವುದು ಬೇಡ. ಏನಾಗುವುದೆಲ್ಲ ಇಲ್ಲಿಯೆ ಆಗಲಿ!"

"ಇಲ್ಲಿ ಆಗುವುದೇನು? ದಿನಾಲು ರಸಕಸಿ, ತಿಕ್ಕಾಟ! ನನಗೂ ಸುಖವಿಲ್ಲ, ಆಕೆಗೂ ಸುಖವಿಲ್ಲ!

"ಹಾಗಾದರೆ ಮಾಡಬೇಕೇನು.... ನೀನೇ ಹೇಳು!"

"ಇಷ್ಟೇ: ಆಕೆ ನಮಗೆ ಅನುಕೂಲೆಯಾಗಿರಬೇಕ!"

"ಹೌದು, ನಾನೂ ಅದನ್ನೇ ಬಯಸುತ್ತೇನೆ. ಆದರೆ ಅದನ್ನು ಸಾಧಿಸುವುದು ಹೇಗೆ....ಎಂತ!"

ಇದಕೊಂದು ಮದ್ದಿದೆ. ನನ್ನೊಬ್ಬ ಗೆಳತಿ ಇಲ್ಲಿದ್ದಾಳೆ. ಅವಳ ಗುರು ಇದರಲ್ಲಿ ಬಲ್ಲಿದ. ಅದನ್ನು ಮಾಡುವುದಾದರೆ ಆಕೆಯನ್ನು ಕೇಳು ತ್ತೇನೆ"

ಅದರಿಂದ ಇವಳ ಜೀವಕ್ಕೇನೂ ಅಪಾಯವಿಲ್ಲವಲ್ಲ?"

"ಛೆ, ಛೆ! ಆ ಮದ್ದು ಇವಳ ಮನಸ್ಸನ್ನಷ್ಟೇ ತಿರುಗಿಸುವುದು. ದೇಹಕ್ಕೆ ಪೀಡೆ ಇಲ್ಲ; ಪ್ರಾಣಕ್ಕೆ ಗಂಡಾಂತರವಿಲ್ಲ!"

"ಅಷ್ಟು ನಿನಗೆ ವಿಶ್ವಾಸವಿದ್ದರೆ ಕೇಳಿ ನೋಡು. ಸರಿಕಂಡರೆ ಮಾಡೋಣವಂತೆ. ಆದರೆ ಇದನ್ನು ಗೌಪ್ಯವಾಗಿ ಮಾಡಬೇಕು. ನನ ಗೇಕೋ ಭಯವೆನಿಸುತ್ತಾ ಇದೆ. ನಿನ್ನದೇ ಧೈರ್ಯ ನೋಡು, ಅವಳ ಪ್ರಾಣಕ್ಕೆ ಕಷ್ಟವಾಗಬಾರದು!"

"ಅದು ನನ್ನನ್ನು ಕೂಡಿತು!"

ಎಂಟು ದಿನದಲ್ಲಿ ಮದ್ದು ಸಿದ್ಧವಾಗಿ, ಅದು ಗಂಗಾಬಾಯಿಯ ಹೊಟ್ಟೆಯಲ್ಲಿ ಹೋಯಿತು. ಮೇಲೆ ಒಂದು ಯಂತ್ರವೂ ಬಂದು ಮನೆಯ ಒಂದು ಜಂತೆಯ ಸಂದಿಯಲ್ಲಿ ಕುಳಿತಿತು!

ಈಗ ಗಂಗಾಬಾಯಿ ಕುಳಿತಲ್ಲಿ ಕುಳಿತುಬಿಡುತ್ತಾಳೆ. ಮಲಗಿ ಬಿಟ್ಟರೆ ಒಂದೊಂದು ದಿನ ಏಳುವುದೇ ಇಲ್ಲ. ಮಕ್ಕಳ ಮೇಲೆ ಮಮತೆ

ಇಲ್ಲ. ಒಮ್ಮೊಮ್ಮೆ 'ಇವು ಯಾರ ಮಕ್ಕಳು,' ? ಎಂದು ಕೇಳುತ್ತಾಳೆ. ಬಟ್ಟೆ ಒಗೆಯುತ್ತಿದರೆ ಸಂಜೆಯ ವರೆಗೆ ಅದನ್ನೇ ಮಾಡುತ್ತಾಳೆ. ಏನನ್ನಾದರೂ ಕೇಳಿದರೆ 'ನನಗೆ ತಿಳಿಯದು' ಎಂದು ಹೇಳುತ್ತಾಳೆ. ಮಲಗಿದಾಗ ಒಮ್ಮೊಮ್ಮೆ ದಿಗ್ಗನೆ ಎದ್ದು, ಕೊಟ್ಟಿಗೆಯ ಎದುರಿಗೆ ಹೋಗಿ ನಿಂತುಬಿಡುತ್ತಾಳೆ. ಇದರಂತೆಯೆ ಎಲ್ಲ. ಒಮ್ಮೆ ಸೀರೆ ಹರಿದು ಒಲೆಹೊತ್ತಿಸಿದಳು. ಒಮ್ಮೆ ಮಾಡಿದ ಅಡಿಗೆಯನ್ನೆಲ್ಲ ತಿಪ್ಪೆಗೆ ಚೆಲ್ಲಿದಳು. ಒಮ್ಮೆ ವೀರಾನ ಕೂದಲನ್ನು ಹಿಡಿದೇ ಜಗ್ಗಿದಳು !

"ಮದ್ದು ಹೆಚ್ಚಾಗಿರಬಹುದೇ, ಅಥವಾ ಯಂತ್ರವೇ ಬೇರೆಯಾಗಿದ್ದೀತೆ ? ಇವಳ ಬೇನೆ ದಿನದಿನಕ್ಕೆ ಹುಚ್ಚಿನ ಸ್ಥಿತಿಗೆ ಹೋಗುತ್ತಾ ಇದೆ. ಹೀಗೆ ಆಗಬೇಕೆಂದು ನಾನು ಎಂದುಕೊಂಡಿರಲಿಲ್ಲ ! ಇದಕ್ಕೇನಾದರೂ ಪ್ರತ್ಯುಪಾಯ ಇದ್ದರೆ ನೋಡು. ನಿನ್ನ ಆ ಗೆಳತಿಯನ್ನು ಕೇಳು !" ವಿ. ಪಿ. ಹೇಳಿದ.

"ಇದೇನಾಯಿತಲ್ಲಾ !— ಎಂದು ನನಗೂ ವ್ಯಸನವಾಗಿದೆ. 'ಇಳಿವು' ಇದ್ದರೆ ಅವಶ್ಯ ಮಾಡಿಸೋಣವಂತೆ; ಕೇಳುತ್ತೇನೆ !"

ಹೀಗೆ ಹೇಳಿದ ವೀರಾ ಎರಡು ದಿನದ ಮೇಲೆ ವಿ. ಪಿ. ಗೆ ತಿಳಿಸಿದಳು: "ಇಳಿವು ಇಲ್ಲ, ಆದರೆ ಇದೇ ಸ್ಥಿತಿಯು ಉಳಿಯಲಾರದು, ಕಡಿಮೆಯಾದೀತು." ವೀರಾ ಈ ವಿಷಯ ಕೇಳಿರಲೇ ಇಲ್ಲ. ಹೇಳಿದುದೆಲ್ಲವೂ ಹುಸಿಮಾತು !

ಒಂದು ದಿನ, ಅಕಸ್ಮಾತ್ತಾಗಿ ಪರಮೇಶ್ವರಭಟ್ಟರು ಬಸ್ಸಿನಿಂದ ಶಿರಸಿಗೆ ಬಂದುಬಿಟ್ಟರು. ಇತ್ತೀಚೆಗೆ ವಿ. ಪಿ. ಯಿಂದ ಅವರಿಗೆ ಪತ್ರವೇ ಹೋಗಿರಲಿಲ್ಲ. ಮಗನನ್ನೊಮ್ಮೆ ಕಾಣಬೇಕೆಂಬ ಆಶೆ, ಆತುರ. ಸೊಸೆಯ ದೇಹಸ್ಥಿತಿ ಚೆನ್ನಾಗಿಲ್ಲದಿರುವುದನ್ನು ಕಂಡು ಅವರಿಗೆ ತುಂಬ ವ್ಯಥೆಯಾಯಿತು. ವಿ. ಪಿ. ಹೇಳಿದ: "ಹೆಂಡತಿ ಒಮ್ಮೆ, ಮಾರಿಕಾಂಬೆಯ ಗುಡಿಯಿಂದ ರಾತ್ರಿ ಬರುವಾಗ ಅಂಜಿದಳು. ಅಂದಿನಿಂದ ಹೀಗಾಗಿದೆ," ಎಂದು

ಮುಂದಿನ ಪರಮೇಶ್ವರಭಟ್ಟರು ಸೊಸೆಯನ್ನೂ ಎರಡು ಮೊಮ್ಮಕ್ಕಳನ್ನೂ ಕರೆದುಕೊಂಡು ಹೊರಟೇಬಿಟ್ಟರು.

ಮುಂದೆ ಎಂಟು ದಿನಗಳಲ್ಲಿಯೆ ವಿರೂಪಾಕ್ಷ ಮತ್ತು ಮೀರಾ ಪುಣೆಗೆ ಪ್ರಯಾಣಬೆಳೆಯಿಸಿದರು. ಪುಣೆಗೆ ಬಂದಮೇಲೆ ವಿ. ಪಿ. ತಂದೆಗೆ ಪತ್ರ ಬರೆದಃ—ಒಂದು ಮಹತ್ವದ ರಿಕಾರ್ಡು ಕೋರ್ಟಿಗೆ ಬೇಕಾಗಿತ್ತು. ಅದಕ್ಕಾಗಿ ತನ್ನನ್ನು ಕೋರ್ಟಿನಿಂದ ಪುಣೆಗೆ ಕಳಿಸಲಾಗಿದೆ. ಸುಮಾರು ಒಂದು ತಿಂಗಳವರೆಗಾದರೂ ತನಗೆ ಅಲ್ಲಿ ಇರಬೇಕಾಗಬಹುದು—ಎಂದು. ನಿಜವಾಗಿ ನೋಡಿದರೆ ಅವನು ರಜೆಯ ಮೇಲೆ ಬಂದಿದ್ದ. ಕಾರಣ ಹೆಂಡತಿಯ ಜಡ್ಡು! ಪರಮೇಶ್ವರಭಟ್ಟರು ನಂಬಿದರು. ದಿನದಿನಕ್ಕೆ ಗಂಗಾಬಾಯಿಯ ದೇಹಸ್ಥಿತಿ ಮನಃಸ್ಥಿತಿ ಕೆಡುತ್ತ ಹೋಯಿತು. ಪರಮೇಶ್ವರಭಟ್ಟರು ತಮಗೆ ತಿಳಿದ ಎಲ್ಲ ಉಪಾಯಗಳನ್ನೂ ಮಾಡಿ ನೋಡಿದರು; ಯಾವುದೂ ಪ್ರಯೋಜನಕ್ಕೆ ಬರಲಿಲ್ಲ.

[೪]

ಪುಣೆಗೆ ಹೋದ ಮೇಲೆ, ವಿ. ಪಿ. ಮತ್ತು ಮೀರಾ 'ಬಾದಶಾಹಿ ಬೋರ್ಡಿಂಗ್'ನಲ್ಲಿ ಇಳಿದರು. ದಿನಾಲು ಒಂದು ಸಿನೇಮಾ, ರೆಸ್ಟೋರಂಟು; ಸಾಯಂಕಾಲ ಟ್ಯಾಕ್ಸಿಯಲ್ಲಿ ಡ್ರೈವ; ಹೀಗೆ ಕಾಲವು ಖುಶಾಲಿಯಲ್ಲಿ ಹೋಗತೊಡಗಿತು. ವಿರೂಪಾಕ್ಷನಿಗೆ ಪುಣೆ ಹೊಸದು. ಮರಾಟಿ ಅವನಿಗೆ ಚೆನ್ನಾಗಿ ಬಾರದು. ಇಂಗ್ಲೀಷೂ ಅಷ್ಟಕ್ಕಷ್ಟೇ. ಮೀರಾ ಮಾತ್ರ ಪುಣೆಯಲ್ಲಿ ಓಡಾಡಿದಾಕೆ. ಮರಾಟಿ ಬಲ್ಲವಳು. ಪಟ್ಟಣಿಗರ ರೀತಿ ನಡತೆ ಅವಳಿಗೆ ಹೊಸವಲ್ಲ. ವಿರೂಪಾಕ್ಷ ಸಾಮಾನ್ಯನಾದೊಬ್ಬ ಗುಮಾಸ್ತ. ಅವನ ಪೋಷಾಖು, ರೀತಿ, ಮಾತು ಅಲ್ಲಿಗೆ ಕಡಿಮೆಯಾಗಿ ತೋರತೊಡಗಿದ್ದುವು. ಮೀರಾಗೆ ಕೆಲವು ಸಾರೆ ಇವನ ಹೆಡ್ಡತನಕ್ಕೆ ನಗೆ ಬರುವುದು, ಒಮ್ಮೊಮ್ಮೆ ಸಿಟ್ಟೂ ಬರುವುದು. ಆದರೂ ಅವನ್ನೆಲ್ಲ ಮರೆತು ಚೆಕ್ಕಂದದಲ್ಲಿ ಕಾಲಕಳೆಯುವಳು. ಹೀಗೆ ಎರಡು ವಾರಗಳು ಸಂದುವು. ಒಂದು ದಿನ ಅವರಿಗೆ ಮಗ್ಗುಲಿನ ರೂಮಿನಲ್ಲಿರುವ ಒಬ್ಬ ಗೃಹಸ್ಥನ ಪರಿಚಯವಾಯಿತು. ಅದಕ್ಕೂ ಒಂದು ಕಾರಣವೊದಗಿತು. ವಿ. ಪಿ. ಸ್ನಾನದ ಕೋಣೆಯಲ್ಲಿ ತನ್ನ ಸೋಪಿನ ಪೆಟ್ಟಿಗೆಯನ್ನು ಬಿಟ್ಟುಬಂದಿದ್ದ. ಆ ಗೃಹಸ್ಥ ಅದನ್ನು ತಂದು ವಿ. ಪಿ. ಗೆ ಕೊಟ್ಟ. ಅದನ್ನು ವಿ. ಪಿ. ಸುಮ್ಮನೆ ಸ್ವೀಕರಿಸಿ ಟೇಬಲ್ ಮೇಲೆ ಇಟ್ಟ. ಇದು ಮೀರಾಗೆ ಸಹನವಾಗಲಿಲ್ಲ. ಆಕೆ ಆ

ಗೃಹಸ್ಥನಿಗೆ ಕೃತಜ್ಞತೆ ಸಲ್ಲಿಸಿ, ಅವನಿಗೆ ಕೂಡುವುದಕ್ಕೆ ಹೇಳಿ, ಸಮಾಚಾರ ಕೇಳಿದಳು. ಇದೇ ಕಾರಣವಾಗಿ ಮುಂದೆ ಹೆಚ್ಚುಹೆಚ್ಚಾಗಿ ಆತನು ಬರುವುದೂ ಹೋಗುವುದೂ ನಡೆಯಿತು. ಎಲ್ಲರೂ ಕೂಡಿ ಚಹ ಕುಡಿಯುವರು, ಹರಟೆಹೊಡೆಯುವರು, ನಗೆಯಾಡುವರು. ಒಂದು ದಿನ ಮೂವರೂ ಸೇರಿ ಸಿನೇಮಾಕ್ಕೆ ಹೋದರು. ಥಿಯೇಟರಿನಲ್ಲಿ ಮೀರಾ ಇಬ್ಬರ ನಡುವೆ ಕುಳಿತಳು. ವಿ. ಪಿ. ಗೆ ಅದು ಎಷ್ಟು ಸೇರಲಿಲ್ಲ. ಸಿನೇಮಾ ನಡೆದಾಗ ಹಲವು ಸಲ ವಿರೂಪಾಕ್ಷ ಮೀರೆಯನ್ನು ಕಾಯ್ದು ಕಣ್ಣಿನಿಂದ ನೋಡಿದ. ಮೀರಾ ಅದನ್ನು ಲಕ್ಷ್ಯಿಸಲಿಲ್ಲ. ಚಿತ್ರದಲ್ಲಿ ವಿ. ಪಿ. ಯ ಮನಸ್ಸೇ ಇರಲಿಲ್ಲ.

ಮೀರಾ ಮತ್ತು ಆ ಗೃಹಸ್ಥ ನಡು-ನಡುವೆ ಮಾತನಾಡುತ್ತಿದ್ದರು; ನಗುತ್ತಿದ್ದರು

ಹೊಟೆಲಿಗೆ ಬಂದ ಮೇಲೆ ಮೀರಾ 'ಊಟ ಮಾಡೋಣ' ಎಂದು ವಿ. ಪಿ. ಯನ್ನು ಕರೆದಳು. 'ನನಗೆ ಹಸಿವೆ ಇಲ್ಲ' ಎಂದು ಹೇಳಿ ವಿ. ಪಿ. ಕಾಟಿನ ಮೇಲೆ ಬಿದ್ದುಕೊಂಡ. ಮೀರಾಗೆ ತುಂಬ ಸಿಟ್ಟು ಬಂದಿತು. ತನ್ನ ಮೇಲೆ ವಿರೂಪಾಕ್ಷನಿಗೆ ಸಂಶಯ, ತಾನು ಥಿಯೇಟರಿನಲ್ಲಿ ಆ ಗೃಹಸ್ಥನ ಜೊತೆಗೆ ಕುಳಿತಿದ್ದು ಇವನಿಗೆ ಸೇರಿಕೆಯಿಲ್ಲ—ಎಂಬ ಮಾತು ಅವಳ ಲಕ್ಷ್ಯಕ್ಕೆ ಬಾರದೆ ಇರಲಿಲ್ಲ. ಬಾಗಿಲನ್ನು ಮುಚ್ಚಿದಳು, ಒಂದು ಕುರ್ಚಿಯ ಮೇಲೆ ಕುಳಿತಳು. ವಿರೂಪಾಕ್ಷ ಬೀಡಿಸೇದುತ್ತ ಅಂದಿನ ಪತ್ರಿಕೆಯನ್ನು ಮೋರೆಯ ಮುಂದೆ ಹಿಡಿದಿದ್ದ. ಓದುವಂತೆ ಕಾಣಲಿಲ್ಲ. ಓದುತ್ತಿದ್ದರೂ ಅದರಲ್ಲಿ ಅವನ ಮನಸ್ಸಿರಲಿಲ್ಲ.

"ಏನಿದು ಹೀಗೆ?... ಊಟವೇಕೆ ಬೇಡ?"

"ನನಗೆ ಹಸಿವು ಇಲ್ಲ!"

"ಇದೆಲ್ಲ ಸೋಗು!"

"ಮತ್ತೆ ನಿನ್ನದೂ ಇಷ್ಟೇ!"

'ಎಂದರೆ?"

'ನಿನ್ನನ್ನೇ ಕೇಳಿಕೊ!"

"ನನ್ನನ್ನೇನು ಕೇಳಿಕೊಳ್ಳುವುದು ? ಈ ಸಿಟ್ಟು ಯಾಕೆ ಎಂಬುದು ನನಗೆ ಗೊತ್ತಿದೆ !"

"ಸರಿ ಹಾಗಾದರೆ ! ಮತ್ತೆ ಕೇಳುವುದೇಕೆ ?"

"ಹೀಗೆ ಸಿಟ್ಟಾಗುವುದು ತಪ್ಪು—ಎಂದು ನಾನೆನ್ನುವುದು !"

"ಹಾಗೆ ನೀನೆನ್ನಬಹುದು !"

ಅಲ್ಲ, ಅವರು ಜೊತೆಗೆ ಕುಳಿತರೆ ಏನಾಯಿತು ? ಇವೆಲ್ಲ ಪಟ್ಟಣಿಗರ ರೀತಿ. ಇಲ್ಲಿಗೆ ಬಂದಮೇಲೆ ಎಲ್ಲರೂ ಹೇಗೋ ಹಾಗೆಯೆ ನಾವಾದರೂ ಇರಬೇಕು. ನಿಮಗೆ ಇಂತಹದನ್ನೆಲ್ಲ ಮಾಡಿಯಂತೂ ಮೊದಲೇ ಗೊತ್ತಿಲ್ಲ; ನೋಡಿಯೂ ಗೊತ್ತಿಲ್ಲ ! ಹಳ್ಳಿಯಲ್ಲಿ ಹುಟ್ಟಿ ಬೆಳೆದವರ ಹಣೆಬರಹ ಇಷ್ಟೇ. ಇದರಲ್ಲಿ ನನಗೇನೂ ವ್ಯತ್ಯಾಸ ತೋರುವುದಿಲ್ಲ. ನಾನು ಹತ್ತಿರ ಕುಳಿತದ್ದಕ್ಕೆ ನೀವು ಸಿಟ್ಟಿಗೆದ್ದಿರೆಂದು ಆ ಗೃಹಸ್ಥನಿಗೆ ತಿಳಿದರೆ ನಿಮ್ಮನ್ನು ಗೇಲಿಮಾಡಿ ಬಿಡಬಹುದು. ಸಾಕು ಈ ಸಿಟ್ಟು ! ಊಟ ಮಾಡೋಣ, ನನಗೆ ಹಸಿವೆಯಾಗಿದೆ !"

"ನಿನಗೆ ಹಸಿವೆಯಾಗಿದ್ದರೆ ನೀನು ಮಾಡಿಕೋ; ನಾನು ಮಾಡುವುದಿಲ್ಲ ಊಟ!....ಸರಿ! ನಿನ್ನ ನೆಲೆ ನನಗೆ ಮೊದಲು ಗೊತ್ತಾಗಲಿಲ್ಲ!"

ಮೀರಾಗೆ ತುಂಬ ಸಿಟ್ಟು ಬಂದಿತು— "ಸರಿ, ಈಗಲಾದರೂ ಗೊತ್ತಾಯಿತಲ್ಲ !"

"ಓಹೊ. ಪೂರಾ ಗೊತ್ತಾಯಿತು !"

"ನನ್ನ ನೆಲೆ ನಿಮಗೆ ಗೊತ್ತಾಗಿದ್ದರೆ, ನಿಮ್ಮ ಬೆಲೆಯೂ ನನಗೆ ಗೊತ್ತಾಯಿತು !"

ಮೀರಾ ಸೆಡವಿನಿಂದ ಎದ್ದು, ದೀಪ ತೆಗೆದು ತನ್ನ ಕಾಟಿನ ಮೇಲೆ ಬಿದ್ದುಕೊಂಡಳು. ರಾತ್ರಿ ಇಬ್ಬರಿಗೂ ನಿದ್ದೆಯಿಲ್ಲ. ಪರಸ್ಪರರ ವಿಷಯದಲ್ಲಿ ಇಬ್ಬರಿಗೂ ಸಿಟ್ಟು, ತಿರಸ್ಕಾರ, ಅಸಹನೆ, ಅನುತಾಪ. ಮರುದಿನವೆಲ್ಲ ಮಾತಿಲ್ಲದೆ ಹೋಯಿತು. ಸಾಯಂಕಾಲ ಆ ಗೃಹಸ್ಥ ಬಂದ. ಪಿ. ಪಿ. ಪೋಸ್ಟಿಗೆ ಹೋಗುವ ನೆಪದಿಂದ ೪ ಗಂಟೆಗೆ ಹೊರಗೆ ಹೋದನ, ೬ ಗಂಟೆಯಾದರೂ ತಿರುಗಿ ಬಂದಿರಲಿಲ್ಲ. ಮೀರಾ ಚಿಂತೆಯಲ್ಲಿ ಕುಳಿತಿದ್ದಳು. ಆ ಗೃಹಸ್ಥ ಒಳಗೆ ಬಂದ ಮೇಲೆ, ಮೋರೆಯ ಮೇಲೆ ಹುಸಿನಗು ತಂದು ಕೇಳಿದಳು: •

"ಮತ್ತೇನು ? ತಿರುಗಾಡಿ ಬಂದಿರಾ ಅಥವಾ ಈಗ ಹೋಗುತ್ತಾ ಇದ್ದೀರಾ ?"

'ಕೆಲಸ ಮುಗಿಸಿಕೊಂಡು ಇದೇ ಈಗ ತಾನೆ ಬಂದೆ. ಏನು, ನಮ್ಮ ವಿ. ಪಿ. ಅವರೆಲ್ಲಿ ?"

"ಪೋಸ್ಟಿನಲ್ಲಿ !" ಮೀರಾ ನಕ್ಕಳು. ಆ ಗೃಹಸ್ಥನೂ ನಕ್ಕ.

"ಅಲ್ಲ, ಎಲ್ಲಿ ಹೋಗಿದ್ದಾರೆ ?"

ನಿಜವಾಗಿ ಪೋಸ್ಟಿಗೇ ಹೋಗಿದ್ದಾರೆ. ನಾಲ್ಕು ಗಂಟೆಗೆ ಹೋದವರು ಇನ್ನೂ ಬಂದಿಲ್ಲ !"

"ಬಂದಾರು, ಎಷ್ಟು ಹೊತ್ತು ಹೋಗುತ್ತಾರೆ ? ಇನ್ನೊಂದು ವಿಶೇಷ ಇಂದು !"

"ಮತ್ತೇನು?"

"ಒಂದು ಕಡೆಗೆ ಇಂಗ್ಲಿಷ್ ಡಾನ್ಸಿನ ಕಾರ್ಯಕ್ರಮ ಇದೆ. ನೀವು ಬರುವ ಹಾಗಿದ್ದರೆ ಹೋಗೋಣ. ನರ್ತಕಿಯರು ಪರದೇಶದಿಂದ ಬಂದಿದ್ದಾರೆ. ಬಹಳ ನೋಡುವ ಹಾಗಿದೆ. ನೀವು ನಿಮ್ಮ ಡ್ರೆಸ್ಸಿನಲ್ಲಿ ಬರಬಹುದು; ಆದರೆ ನಾವು ಸೂಟಿನಲ್ಲಿಯೇ ಹೋಗಬೇಕಾಗುವುದು. ವಿ. ಪಿ. ಯವರಿಗೆ ಸೂಟಿದೆಯೇನು ?"

ಅಷ್ಟರಲ್ಲಿ ವಿ. ಪಿ. ಒಳಗೆ ಬಂದ. ಅವನನ್ನು ನೋಡಿ ಆ ಗೃಹಸ್ಥ— 'Good evening" ಮಿಸ್ಟರ್ ವಿ. ಪಿ.! ಈವೊತ್ತು ರಾತ್ರಿ ಒಂದು ಕಡೆ ಇಂಗ್ಲೀಷ್ ಡಾನ್ಸಿದೆ. ನಿಮಗೆ ಸೂಟಿದೆಯಲ್ಲಾ ?"

"ನಮಗೆ ಸೂಟೂ ಇಲ್ಲ, ನಾವು ಅಂಥದಕ್ಕೆ ಸೂಟೂ ಆಗುವುದಿಲ್ಲ ! ಅಂಥಲ್ಲಿ ಹೋಗುವುದಕ್ಕೆ ತಾವೇ ಯೋಗ್ಯ !...." ಎಂದೆನ್ನುವಾಗ, ಒಮ್ಮೆ ಮೀರಾನ ಕಡೆಗೆ ಬಿರುಗಣ್ಣಿಂದ ನೋಡಿದ. ಮೀರಾನೂ ಅವನನ್ನು ನೋಡಿದಳು. ಆಗೃಹಸ್ಥನ ಹುರುಪು ಅರ್ಧಕ್ಕಿಳಿಯಿತು. ಆದರೂ ನಿರಾಶನಾಗದೆ ಕೇಳಿದ :

"ಮತ್ತೇನು ಮೀರಾದೇವಿ, ಏನು ಮಾಡೋಣ?"

"ನೀವು ಹೋಗಬಹುದು!"

"ನಾನೊಬ್ಬನೇ ಹೋಗುವುದಕ್ಕೆ ಇಷ್ಟವಿಲ್ಲ. ಕೂಡಿ ಹೋಗಬೇಕೆಂದರೆ ವಿ. ಪಿ. ಯವರಿಗೆ ಸೂಟಿಲ್ಲ. ಮಿಸ್ಟರ್ ವಿ. ಪಿ., ನನ್ನ ಸೂಟು ಬಂದರೆ ಹಾಕಿ ನೋಡಿ!"

"ನಾನೆಂದೂ ಸೂಟು ಹಾಕಿಲ್ಲ. ಇಷ್ಟಾಗಿ ನನಗೆ ಅಲ್ಲಿಗೆ ಬರುವ ಮನಸ್ಸಿಲ್ಲ! ನೀವಿಬ್ಬರೂ ಹೋಗಬಹುದು. ನಿಮ್ಮಿಬ್ಬರ ನಡುವೆ ನಾನೇಕೆ ಮೂರನೆಯವ!" ವಿ. ಪಿ. ಗೆ ಮಾತಿನಲ್ಲಿ ತೂಕ-ತಾರತಮ್ಯ ಉಳಿಯಲಿಲ್ಲ ಆದರೆ ಅವನ ಮಾತಿನಿಂದ ಮೀರಾ ತಪ್ತಳಾದಳು. ಆ ಗೃಹಸ್ಥ ತೆಪ್ಪಗಾದ. ಅವನಿಗೆ ಮುಂದೆಯೇನು ಮಾತನಾಡಬೇಕೆಂಬುದೇ ತೋಚದಾಯಿತು ಮೀರಾ ತನ್ನ ಸಿಟ್ಟನ್ನೆಲ್ಲ ಒತ್ತಿ ಹಿಡಿದು, ಮೋರೆಯ ಮೇಲೆ ಕಿರುನಗೆ ತಂದು ನುಡಿದಳು:

"ಅವರ ಮಾತು ಹೀಗೇ! ನೀವು ವಿಪರೀತವನ್ನೇನೂ ಭಾವಿಸಬಾರದು. ನನಗೂ ಒಂದೆರಡು ಅವಶ್ಯ ಪತ್ರಗಳನ್ನು ಬರೆಯಬೇಕಾಗಿದೆ; ಮತ್ತೊಂದಾದರೂ ಆದರೆ ಹೋಗೋಣವಂತೆ!"

ಆ ಗೃಹಸ್ಥ ಸೂಕ್ಷ್ಮ ತಿಳಿದು ಎದ್ದು ಹೋದ. ಮೀರಾ ಬಾಗಿಲನ್ನು ಮುಚ್ಚಿದಳು. ವಿ. ಪಿ. ಯ ಎದುರು ಬಂದು ನಿಂತಳು:

"ನಿಮಗೇನು ತಲೆ ಕೆಟ್ಟಿದೆಯೋ ಏನು? ಆ ಗೃಹಸ್ಥನ ಎದುರು ಸಿಕ್ಕಾಪಟ್ಟೇ ಮಾತನಾಡುತ್ತೀರಿ. ನಾನೆಂದರೆ ಬಸವಿ ಎಂದು ತಿಳಿದಿದ್ದೀರಾ? ಪ್ರೇಮಕ್ಕಾಗಿ ನಾನು ನಿಮಗೆ ಅನುಕೂಲಳಾದೆ; ನಿಮ್ಮ ಮನಸ್ಸಿನಲ್ಲಿ ಇಷ್ಟೊಂದು ಕೊಳಚೆ ಇರಬಹುದೆಂದು ನಾನು ಎಣಿಸಿರಲಿಲ್ಲ. ನಿಮ್ಮ ಹೃದಯದ ಹೊಲಸು ಈಗ ಹೊರಬಿತ್ತು. ಈಗ ಆಡಿ ಫಲವೇನು? ನನ್ನ ಅದೃಷ್ಟವೇ ಹಾಗಿದೆ!" ಎಂದೆನ್ನುವಾಗ ದುಃಖ ಉಮ್ಮಳಿಸಿ ಬಂದು ಆಶ್ರುಗಳು ಟಪಟಪನೆ ಉದುರಲಾರಂಭಿಸಿದುವು. ಹಾಗೆಯೆ ಹೋಗಿ ಕಾಟಿನ ಮೇಲೆ ಬಿದ್ದುಕೊಂಡಳು. ಯಾರೂ ಮಾತನಾಡಲಿಲ್ಲ. ಮರುದಿವ ಬೆಳಗ್ಗೆ ಎದ್ದ ಮೇಲೆ, ತನ್ನ ಅರಿವೆ-ಅಂಚಡಿಗಳನ್ನೆಲ್ಲ ಟ್ರಂಕಿನಲ್ಲಿ ತುಂಬಿದಳು. ಹಾಸಿಗೆ ಕಟ್ಟಿದಳು ಹೋಟೆಲ್ಲಿನ ಬಿಲ್ಲು ಕೊಟ್ಟಳು. ವಿ. ಪಿ. ಇದನ್ನೆಲ್ಲ ವಿಷಣ್ಣಮನಸ್ಕನಾಗಿ ನೋಡುತ್ತಿದ್ದ. ಅವನೆದುರಿರುವ ಮೇಜಿನ ಮೇಲೆ ೨೫ ರೂಪಾಯಿ ಇಟ್ಟು ಮೀರಾ ಹೇಳಿದಳು:

"ನಾನು ಮುಂಬಯಿಗೆ ಹೋಗಬೇಕು!"

"ನಾನೂ ನಮ್ಮೂರಿಗೆ ಹೋಗಬೇಕು!"

"ಇವು ನಿಮಗೆ ಖರ್ಚಿಗೆ ರೂಪಾಯಿ!"

ವಿ. ಪಿ. ಹೊರಡುವ ಸಿದ್ಧತೆ ಮಾಡಿದ. ಆಳುಗಳು ಬಂದು ಸಾಮಾನು ಕೆಳಗೊಯ್ದರು. ಮೆಟ್ಟಿಲುಗಳನ್ನಿಳಿಯುವಾಗ, ಹೋಟೆಲ್ಲಿನ ಆಳು ಒಂದು ತಂತಿಯನ್ನು ತಂದು ವಿ. ಪಿ. ಗೆ ಕೊಟ್ಟ. ನಡುಗುತ್ತಿರುವ ಕೈಯಿಂದಲೇ ಅದನ್ನೊಡೆದು ವಿ ಪಿ. ಓದಿದ. ಮೀರಾ ಕೇಳಿದಳು:

"ಯಾರ ತಂತಿಯದು?"

"ತಂಬೆಯವರದು— ಹೆಂಡತಿ ಬಾವಿಯಲ್ಲಿ ಬಿದ್ದು ಸತ್ತಳಂತೆ!"

"ಕಾರಣ?"

"ನಿನ್ನ ಮುದ್ದು!"